ಪ್ರಕಾಶಕರು:
ಗ. ರು. ಗುಲಗಂಜಿ (ಚಿಕ್ಕೊಪ್ಪ)
ಮುಖ್ಯ ಗುರುಗಳು, ಕ. ಗಂ. ಶಾಲೆ ತಳಕವಾಡ. (ತಾ. ಬದಾಮಿ)








ಮೊದಲನೆಯ ಮುದ್ರಣ ೧೯೫೮, ೧೦೦೦ ಪ್ರತಿಗಳು.





ಮುದ್ರಕರು:
ಪ್ಹಿ. ಎಮ್. ಗಾರವಾಡಮಠ
ಶ್ರೀ ಶಿವಶಕ್ತಿ ಪ್ರಿಂಟಿಂಗ ಪ್ರೆಸ್, ಬಾಗಲಕೋಟೆ.

ಗ್ರಂಥಕರ್ತರು:



ಗ. ರು. ಗುಲಗಂಜಿ, ಚಿಕ್ಕೊಪ್ಪ.

ಮುಖ್ಯ ಗುರುಗಳು:

ಕನ್ನಡ ಗಂಡುಮಕ್ಕಳ ಶಾಲೆ, ತಳಕವಾಡ.

# ಮುನ್ನುಡಿ



ನಮ್ಮ ಪ್ರಾಥಮಿಕ ಶಾಲೆಯ ಗುರುಗಳಾದ **ಗ. ರು. ಗುಲಂಗಜಿ** ಇವರು ತಾವು ಬರೆದ **ನವಜೀವನ** ಈ ನಾಟಕಕ್ಕೆ ಮುನ್ನುಡಿಯನ್ನು ಬರೆಯಲು ಅಭಿಮಾನವೆನಿಸುತ್ತದೆ. ನೀರಬೂದಿಹಾಳ ಶಾಲಾಬಾಲಕರಿಂದ ರಂಗಭೂಮಿಯಮೇಲೆ ಪ್ರದರ್ಶಿಸಲ್ಪಟ್ಟ ಈ ನಾಟಕ ನಾನು ಕಂಡಿದ್ದೇನೆ. ಗ್ರಂಥಕರ್ತರು ಶಿಕ್ಷಣದ ಉದಾತ್ತಧ್ಯೇಯಸಾಧನೆಯ ದಾರಿಯಲ್ಲಿ ಸರಳ ಜೀವಿಯಾಗಿ ಶ್ರಮ ವಹಿಸುತ್ತಿರುವರು. ನಾಟಕರೂಪವಾದ ಸಾಹಿತ್ಯ ರಚಿಸುವದು ಇವರ ಸಹಜ ಪ್ರವೃತ್ತಿ. ಕೆಲವು ನಾಟಕ ಬರೆದು ಕನ್ನಡಿಗರ ಮುಂದಿಟ್ಟಿದ್ದಾರೆ. ಶಿಕ್ಷಕವೃತ್ತಿಯ ಜೊತೆಗೆ ನಾಟಕರೂಪವಾದ ಸಾಹಿತ್ಯ ರಚಿಸಿ ಜಾತ್ಯಾತೀತ ರಾಷ್ಟ್ರನಿರ್ಮಾಣ ಮಹಾ ಕಾರ್ಯಕ್ಕೆ ಅಳಿಲುಸೇವೆ ಸಲ್ಲಿಸಬೇಕೆಂಬ ಹಿರಿಯಾಶೆಯುಳ್ಳ ಇವರನ್ನು ಪ್ರೋತ್ಸಾಹಿಸುವದು ನನ್ನ ಕರ್ತವ್ಯ. **ಶ್ರೀ ಗ. ರು. ಗುಲಗಂಜಿ** ಗುರುಗಳು ಶಿಕ್ಷಣ ಕ್ಷೇತ್ರದಲ್ಲಿ ನಾನು ದುಡಿಯುವೆನೆಂಬ ಪ್ರೇಮದಿಂದಲೋ ಈ ನಾಟಕ ನೋಡಿದವರೆಂಬ ಅಭಿಮಾನದಿಂದಲೋ ನನ್ನಮೇಲಿನ ಭಕ್ತಿಯಿಂದಲೋ ನನಗೆ ಮುನ್ನುಡಿ ಬರೆಯಲು ಕೇಳಿರುವದಾಗಿ ನಂಬಿದ್ದೇನೆ.

ಇವರು ಅಸ್ಪೃಶ್ಯ ನಿವಾರಣೆಗಾಗಿ **ನವಜೀವನ** ನಾಟಕ ಬರೆಯಲು ಸಾಹಸ ಮಾಡಿದ್ದಕ್ಕಾಗಿ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ. ನಾಟಕವೆಂದರೆ ಜನ ಮನದ ಮಲೀನತೆ ಕಳೆಯಬೇಕು. ಸಮಾಜದ ಲೋಪದೋಷಗಳನ್ನು ಕನ್ನಡಿಸಬೇಕು. ನಾಟಕ ಸಮಾಜದ ಮನದಲಿ ನಾಟಿಸಿ ನಗುವನ್ನು ಅರಳಿಸಬೇಕು. ಮತಿಗೆ ಮೆತ್ತಿದ ಮಲೀನತೆಯ ತುಕ್ಕನ್ನು ಅರುವಿನ ಅರದಿಂದ ತಿಕ್ಕಿ ತೆಗೆದು ಸತ್ಯಪಥದತ್ತ ಸಮಾಜವನ್ನು ಸಾಗಿಸಬೇಕೆಂಬುವದೇ ಇದರ ಪರಮೋಚ್ಛಧ್ಯೇಯ. ಈ ನಾಟಕವು ಈ ಧ್ಯೇಯ ಸಾಧನೆಯ ಮಾರ್ಗದಲ್ಲಿಯ ವಿದ್ಯುದ್ದೀಪವೆಂದು ಹೇಳದೆ ಇರಲಾರೆ.

ಮಾನವಸಮಾನತೆಯೇ ಈ ನಾಟಕದ ಜೀವಾಳ. ಅಸ್ಪೃಶ್ಯ ನಿವಾರಣೆ ಇದರ ಸಮಸ್ಯೆ. ಆ ಸಮಸ್ಯೆಗಳ ಗರ್ಭದಲ್ಲಿ ವ್ಯಕ್ತಿ ವ್ಯಕ್ತಿಗಳ ಸೆಣೆಸಾಟ ನಡೆದಿದೆ. ಜಾತಿ ಮತಗಳು ಅನಾದಿಕಾಲದಿಂದಲೂ ಬಂದವುಗಳು ಶಾಸ್ತ್ರಸಮ್ಮತವಾದವುಗಳು ಎಂದು ಒಂದು ಬಣ. ಅನಾದಿಕಾಲದಲ್ಲಿ ಮಾನವ ಬಾಳಿ ಬದುಕಲು ಕಾಯಕದ ರಚನೆಯಾಗಿ ಮುಂದೆ ಕಾಯಕವು ಕುಲವಾಗಿ ಕವಲೊಡೆದು ಅನಂತ ಜಾತಿಗಳಾಗಿ ಮೇಲು-ಕೀಳಿನ ಕೊಳೆಯಾಗಿ ಮಹಾಪುರುಷರ ತಲೆ ಕೆಡಿಸಹತ್ತಿವೆ. ಜಾತಿ-ಮತಗಳು ಶಾಸ್ತ್ರ ಸಮ್ಮತವಲ್ಲ. ಶಾಸ್ತ್ರಗಳನ್ನು ಅಪಾರ್ಥಮಾಡಿದ ಸ್ವಾರ್ಥಿಗಳ ಸಿದ್ಧಾಂತವೆಂದು ಮತ್ತೊಂದು ಬಣ. ಹೀಗೆ ಎರಡು ಬಣಗಳು ಕಣಕ್ಕಿಳಿದಿವೆ. ವಿಚಾರಗಳ ಪ್ರಚಂಡ ಪ್ರವಾಹವೇ ಎದ್ದು ಜಾತಿ-ಮತವಾದಿಗಳ ತತ್ವಗಳು ಮುಳುಗಿ ಮಾನವಧರ್ಮ ಒಂದು, ಅದು ಹಿಂದು ಧರ್ಮ. ಹಿಂದುಧರ್ಮದಲ್ಲಿ ನೂರಿನ್ನೂರು ಜಾತಿಗಳಿಲ್ಲ. ಭಾರತೀಯರೆಲ್ಲರೂ ಒಂದು. ಬಾಳು ಒಂದು. ಬದುಕು ಒಂದು. ಕುಲವೊಂದೆಂಬ ನೀತಿ ಜಯಿಸುತ್ತಿದೆ. ಜಾತಿ-ಮತಗಳ ಮೇಲಿನ ಅಂಧಶ್ರದ್ಧೆಯು ಮಾನವರ ಮನೋರಾಜ್ಯದಿಂದ ಕೆಳಗಿಳಿದು ಮಾನವ ಸಮಾನತೆಯ ಸುಜ್ಯೋತಿ ಉದಯವಾಗುತ್ತಿದೆ. ನಾಟಕಕಾರರು ಜಾತಿಯಭೂತ ಮೈತುಂಬಿ ಕುಣಿದಾಡುವ ಸಮಾಜಕ್ಕೆ ನೀತಿ ಶಾಸ್ತ್ರದ ತತ್ವ ತಿಳಿಸಲು ಶಿವಶರಣರ ವಚನಗಳನ್ನು ಸೇರಿಸಿದ್ದಾರೆ. ಆಧ್ಯಾತ್ಮಿಕ ತಕ್ಕಡಿಯನ್ನು ಬಳೆಯಿಸಿದ್ದಾರೆ. ಅಸ್ಪೃಶ್ಯತೆಯನ್ನು ಸುಲಭ ಸರಳರೀತಿಯಲ್ಲಿ ಸ್ವಾರಸ್ಯವಾಗಿ ನಿವಾರಿಸಿದ್ದಾರೆ.

ನಾಟಕಕಾರರಾದ **ಶ್ರೀ ಗ. ರು. ಗುಳಗಂಜಿ** ಗುರುಗಳ ಪ್ರಯತ್ನ ಸ್ತುತ್ಯವಾಗಿದೆ. ಪ್ರಾಥಮಿಕ ಶಾಲಾ ಗುರುಗಳು ಇಂತಹ ಸಾಹಿತ್ಯಕ ಚಟುವಟಿಕೆಗಳಲ್ಲಿ ಮನಸ್ಸು ಹಾಕಬೇಕು. ಈ ದಿಶೆಯಲ್ಲಿ ಸಾಗಬೇಕು. ಇಂತಹ ಸಾಹಿತ್ಯಗಳಿಗೆ ಕನ್ನಡಿಗರು ಪ್ರೋತ್ಸಾಹಿಸಬೇಕು.

**ಪಿ. ಎಮ್. ನಾಡಗೌಡ** LL. B. M. L. C.

ಬಾಗಲಕೋಟೆ, ಚೇರಮನ್:

೩೧-೮-೫೮ ಡಿ. ಸ್ಕೂಲಬೋರ್ಡ, ವಿಜಾಪುರ

# ಅಭಿಪ್ರಾಯ

**ಶ್ರೀ ಗ. ರು. ಗುಲಗಂಜಿ** ಗುರುಗಳನ್ನು ಬಲ್ಲ ಯಾರಿಗೆ ತಾನೆ ಅವರನ್ನು ಕುರಿತು ಮಾತಾಡಲು ಉತ್ಸಾಹವಾಗುವದಿಲ್ಲ. ಸುಮಾರು ೨೦ ವರ್ಷಗಳಿಂದ ಇವರ ಪರಿಚಯ. ಪ್ರಾಥಮಿಕಶಾಲೆಯ ಗುರುಗಳಾದ ಇವರ ವಿದ್ಯಾರ್ಥಿವೃಂದವೇ ಶಿಕ್ಷಣದಲ್ಲಿಯ ಇವರ ಕರ್ತವ್ಯದಕ್ಷತೆಯ ಪ್ರತ್ಯಕ್ಷ ನಿದರ್ಶನ. ನಾಟಕ ಬರೆಯುವದಲ್ಲಿಯ ಇವರ ಜ್ಞಾನಾನುಭವಗಳ ದರ್ಶನ ರಂಗಭೂಮಿಯಮೇಲಿನ ಪ್ರೇಕ್ಷಕರಿಗೆ ಬೇಸರಿಕೆ ಅನಿಸದೆ. ಮನದ ಆನಂದವನ್ನು ಅರಳಿಸುವ ನಾಟಕದ ಪ್ರದರ್ಶನ. ಅಸ್ಪೃಶ ನಿವಾರಣೆಯ ಈ ಮಹತ್ಕಾರ್ಯಕ್ಕಾಗಿ ಬರೆದ ಈ **ನವಜೀವನ** ನಾಟಕವನ್ನು ನೀರಬೂದಿಹಾಳ ಶಾಲಾ ಬಾಲಕರಿಂದ ರಂಗಭೂಮಿಯಮೇಲೆ ಪ್ರದರ್ಶಿಸಲ್ಪಟ್ಟದ್ದನ್ನು ನೋಡಿದ್ದೇನೆ. ಹಿಂದುಧರ್ಮದಲ್ಲಿಯ ಕಲಂಕಪ್ರಾಯವಾದ ಅಸ್ಪೃಶ್ಯತೆಯನ್ನು ನೀತಿಶಾಸ್ತ್ರದ ಸಾಣೆಗೆಯಲ್ಲಿ ಸೋಸಿ ಮಾನವರೆಲ್ಲರೂ ಒಂದೆಂಬ ತತ್ವವನ್ನು ಸಮಾಜಕ್ಕೆ ತಿಳಿಸಿದ್ದಾರೆ. ಮಾನವೀಯತೆಯ ಅರಿವನ್ನುಂಟು ಮಾಡಿದ್ದಾರೆ. ಅಸ್ಪೃಶ್ಯ ನಿವಾರಣೆಗೆ ಈ ನಾಟಕ ಅತ್ಯಂತ ಸಹಾಯಕಾರಿ ಆದೆ ಎಂದು ಅಭಿಮಾನದಿಂದ ಹೇಳುತ್ತೇನೆ. ಇದರಿಂದ ವಿಸ್ತೃತವಾದ ಸಮಾಜ ಸೇವೆಯು ಘಟಿಸಲೆಂದು ಹಾರೈಸುತ್ತೇನೆ.

**ತಳಕವಾಡ** | **ಎನ್. ಡಿ. ಮೋಟೆ.**

ತಾ ೩೧—೮—೫೮ | **ಡಿ. ಎಲ್. ಬಿ. ಮೆಂಬರ ವಿಜಾಪೂರ.**



# ಮೊದಲಮಾತು

ಇಂದು ಕನ್ನಡ ನಾಡನುಡಿಯ ಮೇಲಿನ ಮಮತೆ ಪವಿತ್ರ ಪ್ರೇಮದ ಗಂಗಾ ಪ್ರವಾಹವಾಗಿ ಹರಿಯುತ್ತಲಿದೆ. ನಾಡಿನ ಅನೇಕ ಹಿರಿಯರು ಈ ಪ್ರವಾಹದಲ್ಲಿ ಮಿಂದು ಮಡಿಯಾಗಿ ಕನ್ನಡದೇವಿಗೆ ಹಿರಿಯ ಕಾಣಿಕೆಯನ್ನು ಸಲ್ಲಿಸಿದ್ದಾರೆ. ನಾನೊಬ್ಬ ಕನ್ನಡದೇವಿಯ ಆರಾಧಕ ಕಿರಿಯಭಕ್ತ ನಾನೇನು ಕೊಡಬಲ್ಲೆ? ನನ್ನಲ್ಲಿ ಹಿರಿಯ ಕಾಣಿಕೆಯಿಲ್ಲ. ಮಲ್ಲಿಗೆ, ಸೇವಂತಿಗೆ, ಗುಲಾಬಿ ಹೂಗಳಿಂದ ಹೆಣೆದ ಮಾಲೆಯಿಲ್ಲ. ಆದರೆ ಕನ್ನಡ ನುಡಿ ಒಲುಮೆಯ ಕಿರಿಯ ಝರಿಯಲ್ಲಿ ಕುಳಿತು ಮನದ ಮೈಲಿಗೆ ತೊಳೆದು, ಮನಕೆ ಮುಟ್ಟದ ಕೈಗೆ ನಿಲುಕದ ಹೊನ್ನವರಿಯ ಹೂವೊಂದನ್ನು ತಾಯಡಿಯಲ್ಲಿ ಭಕ್ತಿಕಂಪಿತನಾಗಿ ಅರ್ಪಿಸಲು ಆಶೆಗೊಂಡಿದ್ದೇನೆ. ಇದಕ್ಕೆ ಸುವಾಸನೆ ಇರದಿದ್ದರೂ ಭಕ್ತಿಯ ಅನುಕಂಪದ ಬಣ್ಣವಿದೆ ಎಂಬ ನಂಬಿಗೆ.

ಕನ್ನಡ ನಾಡನುಡಿಗೆ ನಾಟಕ ರೂಪದ ಸಾಹಿತ್ಯ ಸೇವೆ ಮಾಡಬೇಕೆಂಬ ಹಂಬಲ ಈಗಾಗಲೆ ಪಾನಪ್ರತಿಬಂಧದ ಪ್ರಚಾರಕ್ಕಾಗಿ "ಮಾಂಗಲ್ಯ ಮಹಿಮೆ" ಎಂಬ ನಾಟಕ ಬರೆದು ೧೯೫೦ರಲ್ಲಿ ಪ್ರಕಾಶಿಸಲಾಯಿತು. ಅಳಿಲುಸೇವೆ ಮಾಡಿದೆನೆಂಬ ಭಾವಹೃದಯತುಂಬಿ ಹರಿಯಿತು ಮುಂದೆ ಅಸ್ಪೃಶ್ಯತಾ ನಿವಾರಣೆಯ ಕೂಗು ಮನದಲ್ಲಿ ಮಿಡಿಯಿತು. ನನ್ನ ಹಂಬಲವನ್ನು ಪೂಜ್ಯ ಹಿರಿಯರಾದ ಶ್ರೀ ಡಾ|| ಎಸ್. ಎಸ್. ಪಾಟೀಲ ಕೊಣ್ಣೂರ ಇವರಿಗೆ ಅರುಹಿದೆ. ಸ್ವತಂತ್ರ ಭಾರತದ ಆದರ್ಶಕ್ಕೆಅಸ್ಪೃಶ್ಯತೆಯು ಅತಂಕವಾಗಿದೆ. ಗಾಧೀಜಿಯವರ ದಿವ್ಯಸಂದೇಶ ಬೀರುವ ಈ ಅಸ್ಪೃಶ್ಯ ನಿವಾರಣೆಗಾಗಿ ನಾಟಕ ಬರೆಯಬೇಕೆಂದು ಹೃದಯ ಬಿಚ್ಚಿ ಹರಿಸಿದರು. ಸೂಕ್ತ ಸಲಹೆ ಸೂಚನೆ ನೀಡಿದರು. ಅವರ ಸೂಚನೆ ಪ್ರೇರಣೆಗಳ ಫಲವೇ ಈ ನವ ಜೀವನ ನಾಟಕ. ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಕನ್ನಡ ನಾಡಿನ ಹಿರಿಯರೂ, ಶಿಕ್ಷಣಾಭಿಮಾನಿಗಳೂ, ವಿಜಾಪುರ ಜಿಲ್ಹಾ ಸ್ಕೂಲಬೋರ್ಡಿನ ಚೇರಮನ್‌ರಾದ ಶ್ರೀ **ಪಿ. ಎಂ. ನಾಡಗೌಡರು** LL. B. M. L. C. ಬಾಗಲಕೋಟ ಇವರು ನನ್ನ ಪ್ರಾರ್ಥನೆಯ

ಮನ್ನಿಸಿ ವಿಮರ್ಶಾತ್ಮಕ ಅಮೂಲ್ಯ ಮುನ್ನುಡಿ ಬರೆದು ಪ್ರೋತ್ಸಾಹಿಸಿದ ಇವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ನನ್ನನ್ನು ಈ ಕಾರ್ಯದಲ್ಲಿ ಪ್ರೋತ್ಸಾಹಿಸಿದ ಶ್ರೀ ಎನ್. ಡಿ. ಮೇಟಿ, ಡಿ. ಎಲ್. ಬಿ. ಸದಸ್ಯರು ವಿಜಾಪುರ, ಹಾಗೂ ಶ್ರೀ ಬಿ. ಆರ್. ಮುಕ್ಕುಪ್ಪಿ, B. A. ಶಾಪ ಇನಸ್ಪೆಕ್ಟರ ಬಾಗಲಕೋಟೆ ಇವರಿಗೆ ನನ್ನ ಹಾರ್ದಿಕ ವಂದನೆಗಳು.

ಈ ಕಾರ್ಯದಲ್ಲಿ ಸಕಾಲಕ್ಕೆ ಸಹಾಯಮಾಡಿದ ಶ್ರೀ ಸ. ಹ. ಮಡಿವಾಳ B. A. ಇವರಿಗೂ, ನಾಟಕ ಬರೆಯುವಾಗ ಬಹು ರೀತಿಯಿಂದ ನೆರವಾದ ನನ್ನ ನಚ್ಚಿನ ಗೆಳೆಯರಾದ ಶ್ರೀ ಬ. ಬ. ನಡುವಿನಮನಿ, ಶ್ರೀ ಈ. ಬ. ಕಿತ್ತಲಿ, ಶ್ರೀ ತಿ. ಮ. ಹಿರೇಮಠ, ಇವರೆಲ್ಲರಿಗೆ ನನ್ನ ವಂದನೆ ಸಲ್ಲಿಸದಿರಲಾರೆ. ಈ ನಾಟಕ ಅಸ್ಪೃಶ್ಯ ನಿವಾರಣೆಗೆ ಸಹಾಯಕಾರಿ ಆದೆ ಎಂಬುದನ್ನರಿತು ಶ್ರೀ ಕಾಳಿಕಾಭವಾನಿ ನಾಟ್ಯಸಂಘ ಶಿರಸಂಗಿ ಇವರಿಂದ ಪ್ರಥಮ ರಂಗಭೂಮಿಯ ಮೇಲೆ ತಂದು ಇದಕ್ಕೆ ಬೆಳಕು ನೀಡಿದ ಶ್ರೀ ರುದ್ರಗೌಡರು ಪಾಟೀಲ ಬೆಳ್ಳೇರಿ ಇವರಿಗೂ ಶ್ರೀ ಕಾಳಿಕಾ ನಾಟ್ಯ ಸಂಘದವರಿಗೂ ಅತ್ಯಂತ ಉಪಕೃತನಾಗಿದ್ದೇನೆ. ಎರಡನೆ ಪ್ರಯೋಗವು ನೀರಬೂದಿಹಾಳ ಶಾಲಾ ಬಾಲಕರಿಂದ ರಂಗಭೂಮಿಯ ಮೇಲೆ ತಂದು ಬೇಗ ಬೆಳಕಿಗೆ ಬರಲೆಂದು ಹರಸಿದ ಶ್ರೀಮಂತ ಕೃಷ್ಣರಾವ ತುಳಸಿಗೇರಿಪ್ಪ ಒಡೆಯರ ದೇಸಾಯಿ ನೀರಬೂದಿಹಾಳ ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ತಮ್ಮ ಶಾಲಾ ಬಾಲಕರಿಂದ ರಂಗಭೂಮಿಯ ಮೇಲೆ ತಂದು ಶೀಘ್ರ ಬೆಳಕಿಗೆ ಬರುವಂತೆ ಮಾಡಿದ ಸರ್ವ ಶ್ರೇಯಸ್ಸು ಶ್ರೀ ಹ. ಸ. ಉದಗಟ್ಟಿ ಉ. ಗುರು ನೀರಬೂದಿಹಾಳ ಶಾಲೆ ಇವರದೆಂದರೆ ಅತಿಶಯೋಕ್ತಿಯಾಗಲಾರದು. ಸಹಭಾಗಿಗಳಾದ ಮು. ಗುರು ಶ್ರೀ ಹಿರೇಮಠರವರಿಗೂ ನಾನು ಚಿರಋಣಿ.

ನನ್ನನ್ನು ಪ್ರೋತ್ಸಾಹಿಸಿದ ಹಿರಿಯರಾದ ಶ್ರೀ ಬಿ. ಹ. ಪಾಟೀಲ ಮು. ಗುರು ನರಗುಂದ, ಶ್ರೀ ಶಂ. ಸಿ. ಕಲ್ಹಾಳ ಮು.ಗು. ಚಿಕ್ಕೊಪ್ಪ ಇವರಿಗೆ ಅನಂತ ಪ್ರಣಾಮಗಳು. ಗೆಳೆಯರಾದ ಶ್ರೀ ರು ಸಿ. ಹಿರೇಮಠ ಮು. ಗುರು ತಾ.ಶಾ ಬಾಗಲಕೋಟೆ, ಶ್ರೀ ಎಸ್. ಪಿ. ಸಜ್ಜನ, ಬಾಗಲಕೋಟೆ ಶ್ರೀ ರಾ. ತು. ಪಾಟೀಲ ಕೊಣ್ಣೂರ. ಶ್ರೀ ಬಾಲರಡ್ಡಿ ತಾಯಣ್ಣವರ ಶಿರೋಳ

ಈ ಗುರುವೃಂದಕ್ಕೂ ಹಾಗೂ ಶ್ರೀ ಎಂ. ಸಿ. ಪೋಟಿ, ಇಂಟರ ಸಾಯನ್ಸ ಬಾಗಲಕೋಟ, ಶ್ರೀ ಶಿ. ಲ ಹಾಗನೂರ, ಶ್ರಿ ಡಿ. ಎಚ್. ಹಳ್ಳಿಕೇರಿ, ಶ್ರಿ ಡಿ. ಎಚ್ ಹೊಳಿಯಣ್ಣವರ ೨ನೇ ವರ್ಷ ಕ. ಟ್ರೇ ಕಾಲೇಜ ಶಿಕ್ಷಕ ವಿದ್ಯಾರ್ಥಿ ಬಾಗಲಕೋಟ ಇವರಿಗೂ ಕೊನೆಯದಾಗಿ ಕಾಲದಲ್ಲಿ ಅಂದ ವಾಗಿ ಮುದ್ರಣ ಮಾಡಿಕೊಟ್ಟ ಬಾಗಿಲುಕೋಟೆಯ ಶ್ರೀ ಶಿವಶಕ್ತಿ ಪ್ರೆಸ್ಸಿನ ಒಡೆಯರಿಗೂ ಅನಂತ ವಂದನೆಗಳು.

**ತಳಕವಾಡ** **ಗ. ರು. ಗುಲಗಂಜಿ**

೨೭-೫-೫೮

* * * * * * * * *

## ಪಾತ್ರಪರಿಚಯು

**ದೇವದಾಸ**— ಜಹಾಗೀರದಾರ ಹಳೇ ರೂಢಿಗೆ ಮೆಚ್ಚಿದವ ಸುಮಾರು ೫೦ ವರ್ಷದವ.

**ಇಂದುಧರ**— ದೇವದಾಸರ ಪುತ್ರ ಬಿ. ಎ. ಕಾಲೇಜದಲ್ಲಿ ಅಭ್ಯಾಸ ಮಾಡುವವ ಖಾದಿ ಉಡುಪು ಸುಮಾರು ೨೫ ವರ್ಷದವ.

**ದಯಾವತಿ**— ದೇವದಾಸರ ಹೆಂಡತಿ ಸಾಧ್ವಿ ಸುಮಾರು ೪೫ ವರ್ಷ.

**ಸುರೇಶ**— ಸಾವುಕಾರ ಸುಮಾರು ೨೫ ವರ್ಷದವ.

**ಶಿಲಾಕಾಂತ**— ಪಂಡಿತರು ಆಚಾರವಂತರು ಸುಮಾರು ೫೦ ವರ್ಷದವರು

**ಜೀವನ**— ಹರಿಜನ ದೇವದಾಸಿಯ ಪುತ್ರ ಬಿ. ಎ. ಕಾಲೇಜದಲ್ಲಿ ಅಭ್ಯಾಸಮಾಡುವವ. ಖಾದಿ ಉಡುಪು ಸವಾರು ೨೨ ವರ್ಷದವ.

**ನೀಲಾ**— ಜೀವನನ ತಂಗಿ ಕುಮಾರಿ ಪ್ರಾಥಮಿಕ ಶಿಕ್ಷಣ ಪಡೆದ ವಳು. ಸುಮಾರು ೧೮ ವರ್ಷದವಳು.

**ಇಂದ್ರಾ**— ಸುರೇಶ ಸಾವುಕಾರನ ತಂಗಿ ಕುಮಾರಿ ಮಾಧ್ಯಮಿಕ ಶಿಕ್ಷಣ ಪಡೆದವಳು ಸುಮಾರು ೧೮ ವರ್ಷದವಳು.

**ಕಲ್ಲುಬಾಯಿ**— ಶಿಲಾಕಾಂತ ಪಂಡಿತರ ಹೆಂಡತಿ ಸುಮಾರು ೪೫ ವರ್ಷ.

**ಮಲ್ಲವ್ವ**— ಜೀವನನ ಚಿಕ್ಕಮ್ಮ ವಿಧವೆ.




॥ ಶ್ರೀಗುರು ವಿಜಯ ವೀರಭದ್ರೇಶ್ವರ ಕಾಯಕ ॥

# ನವಜೀವನ

## ೧ ನೇ ಅಂಕು

### ೧ ನೇ ಪ್ರವೇಶ

**ನಾಂದಿ**

ನಮಿಪೆವು ಗುರುವೃಂದಕೆ। ಅಡಿಗಾವು ಮುದದಿಂದ।
ತವಖ್ಯಾತಿ ನಾಮವನು। ಅನುದಿನ ಸ್ಮರಿಸುವೆವು ।ಪ॥

ಸತ್ಯಗುರು ಗಾಂಧೀಜಿ। ತತ್ವಗುರು ಜವಾಹರ
ಆಧ್ಯಾತ್ಮಗುರು ಅರವಿಂದ। ಕಾವ್ಯಗುರು ರವೀಂದ್ರ ॥೧॥

ರಾಷ್ಟ್ರಗುರು ರಾಜೇಂದ್ರ। ಮೋಕ್ಷಗುರು ಪರಮಹಂಸ।
ವಿಶ್ವಗುರು ವಿವೇಕಾನಂದ। ಕ್ರಾಂತಿಗುರು ಸುಭಾಸಾ ॥೨॥

ಪರಿಮಳ ಕುಸುಮಗಳೀ। ಭಾಸುರಮಾಲೆಯುನಾವ್।
ಅರ್ಪಿಸಿ ಪ್ರಾರ್ಥಿಸುವೆವು। ಪರಿಪಾಲಿಸು ಗುರುವೃಂದವೇ ॥೩॥

**ಶೀಲಾಕಾಂತ**— (ರೇಶಿಮೆಯ ಬಟ್ಟೆಯನ್ನುಟ್ಟು ದೇವದರ್ಶನಕ್ಕೆ ಹೋಗುವಾಗ) ಥೂ! ಥೂ!! ಈಗಿನ ಜನರಿಗೆ ನೇಮ-ನಿತ್ಯಗಳಲ್ಲಿ ಮನಸ್ಸಿಲ್ಲ ಪೂಜೆ-ಪುನಸ್ಕಾರಗಳಪ್ರಜ್ಞೆಯಿಲ್ಲ, ಗುರು-ಹಿರಿಯರ ಅಂಜಿಕೆಯಿಲ್ಲ, ಮಡಿ-ಮೈಲಿಗೆಗಳ ಕಲ್ಪನೆಯಿಲ್ಲ, ಕುಲ-ಶೀಲಗಳಿಗೆ ಬೆಲೆಯಿಲ್ಲ, ರೀತಿ-ನೀತಿಗಳು ಇಲ್ಲವೇ ಇಲ್ಲ. ಎಲ್ಲಿ ನೋಡಿದಲ್ಲಿ ಜಾತಿ-ಮತಗಳಮೇಲೆ ತಿರಸ್ಕಾರ ವಿಜಾತಿ ವಿವಾಹ, ವಿಧವಾ ವಿವಾಹ, ಅಸ್ಪೃಶ್ಯನಿವಾರಣಗಳಿಗೆ ಪುರಸ್ಕಾರ ಈ ನವಯುಗದ ವಿಚಾರಕ್ಕೆ ಆಚಾರದೇವತೆಯು ದಿಕ್ಕೆಟ್ಟು ಓಡಿ ಕಾಡು

ಸೇರಿದ್ದಾಳೆ. ಅಂತೆ ದ್ವೇಷ, ಅಸೂಯೆ, ವಂಚನೆ, ಕಳವು, ಕೊಲೆ ಈ ತಾಮಸವೃತ್ತಿಗಳ ಚಕ್ಕಂದದ, ಚಲ್ಲಾಟ! ನಮ್ಮಂಥ ಆಚಾರವಂತರ ಗೋಳಾಟ ನಡೆದಿದೆ, ಕುಲ ಕಲಮಲಕಾಗಿ ಶ್ವೇಚ್ಛಾಚಾರದ ಸಲುಗೆಯಲ್ಲಿ ಮತ-ಪಂಥಗಳು ಕರಗಿ ನೀರಾಗಿ ಹರಿದು ಹಳ್ಳಾಕೂಡಿವೆ. ಆಚಾರವಂತರ ಹೃದಯ ನೋಯಹತ್ತಿದೆ. ಮಡಿಯಿಂದ ದೇವದರ್ಶನಕ್ಕೆ ಹೋಗ ಬೇಕೆಂದರೆ ಸಾಕು ಬೇಕಾಗುತ್ತದೆ. ಮಹಧೀಶ್ವರಾ! ಬೇಗನಮ್ಮಂಥವ ರನ್ನು ಮರೆಮಾಡೋ (ಜೀವನನು ಪುಸ್ತಕಹಿಡಿದುಕೊಂಡು ಬರುವನು) ಏನು ಮಡಿಯಿಂದ ದೇವದರ್ಶನಕ್ಕೆ ಹೋಗುವಾಗ ನೆಟ್ಟಗೆ ಎದುರಿಗೆ ಬರುವಿಯಲ್ಲೋ? ಸರಿ ಹಿಂದಕ್ಕೆ.

**ಜೀವನ**— ಮಡಿಯಿಂದ ತಾವು ಹೋಗುವಾಗ ನಾನು ಎದು ರಿಗೆ ಬಂದರೆ ತಮಗಾವ ಅತಂಕವಾಯಿತು?

**ಶಿಲಾಕಾಂತ**— ಥೂ! ಥೂ!! ಇಲ್ಲೀನು ಅದೇನೇ ಮಡಿಯಿಂದ ಗುಡಿಗೆ ಹೋಗುವ ನನಗೆ ನೀ ತೊಟ್ಟ ಬಟ್ಟೆಗಳು ತಾಗಿದರೆ ಮೈಲಿಗೆ ಯಾಗುವದಿಲ್ಲವೇ ಇಷ್ಟುಸಹ ಕಲ್ಪನೆ ಇಲ್ಲವೆ ನಿನಗೆ.

**ಜೀವನ**— ಬಟ್ಟೆಯ ನೀರೊಳಗೆದ್ದಿ ಒಣಗಿಸಿ ಉಟ್ಟುಕೊಂಡರೆ ಅದು ಮಡಿಯಲ್ಲಾ ಹೊಟ್ಟೆಯೊಳಗಿನ ಕಾಮ ಕ್ರೋದವ ಬಿಟ್ಟು ನಡೆ ದರೆ ಅದು ಮಡಿಯು. ಮಲ-ಮೂತ್ರಮಯವಾದ ಈ ಶರೀರಮೆಚ್ಚಿ ತೊಳೆದರೆ ಅದು ಮಡಿಯಲ್ಲಾ ದಯೆ–ಮಮತೆಯಿಂದ ಮಾನವರನ್ನು ಕಾಣುವದೇ ಮಡಿಯು. ಮತ್ತೊಬ್ಬರ ಮನ ನೋಯಿಸುವದು ಮೈಲಿಗೆ. ಹುಸಿನುಡಿಯಾಡುವದು ಮೈಲಿಗೆ. ಮಲೀನವಾದ ಮನಸ್ಸೇ ಮೈಲಿಗೆ. ಮಾನವರಿಗೆ ಮಾನವರ ಬಟ್ಟೆಗಳು ತಾಗಿದರೆ ಮೈಲಿಗೆಯಾಗಲಾರದು.

**ಶಿಲಾಕಾಂತ**— ನಿಮ್ಮಂಥ ಕಲಿತವರಿಗೆ ಮಡಿ-ಮೈಲಿಗೆಗಳ ತಾರ ತಮ್ಯವೇ ಇಲ್ಲ. ನಿಮ್ಮನ್ನು ನೋಡಿದರೆ ಹಿಡಿಸಲಾರದಷ್ಟು ಕೋಪಬರು ತ್ತದೆ. ಧರ್ಮದ ಹಿರಿಮೆಯನ್ನರಿಯದೆ ಹೊಸವಿಚಾರದ ಹುಮ್ಮಸದಲ್ಲಿ ಹುಚ್ಚರಂತೆ ವಾದಿಸುವದು ಇಂದಿನ ತರುಣರ ಕರ್ತವ್ಯವಾಗಿದೆ. ಸ್ನಾನ ಪೂಜೆ-ಪುನಸ್ಕಾರ, ಜಪ-ತಪಗಳು, ಭಕ್ತಿ, ಜ್ಞಾನದ ಸಾಧನಗಳು

ಮುಕ್ತಿ ಮಾರ್ಗದ ಸೋಪಾನಗಳು. ಇವು ಮಾನವನ ಸದ್ಗತಿಗೆ ಸಾಧನ ಮಡಿ-ಹುಡಿಗಳ ಕಲ್ಪನೆಯಿಲ್ಲದೆ ಮಾತಾಡುವಿಯಲ್ಲೋ? ನೀನಾರು?

**ಜೀವನ—** ಸ್ವಾಮಿ ನಾನು ಇದೇ ಊರ ಹರಿಜನ ಚನ್ನಪ್ಪನ ಮಗನು ಜೀವನನು.

**ಶೀಲಾಕಾಂತ—** (ಆಶ್ಚರ್ಯದಿಂದ) ಹರಿಜನ! ಅದಾವ ಹೊಸ ಸಮಾಜ ಉದಯವಾಯಿತೋ ಮತ್ತೆ?

**ಜೀವನ—** ಗೊತ್ತಿಲ್ಲವೆ ತಮಗೆ. ಪೂಜ್ಯ ಮಹಾತ್ಮಾಗಾಂಧಿಯವರು ಪ್ರೇಮದಿಂದ ಕರೆದ ಸಮಾಜ.

**ಶೀಲಾಕಾಂತ—** (ನಗುತ್ತ) ಹೀಗೋ? ನಮ್ಮೂರ ಹೊಲೆಯರ ಚನ್ನನ ಮಗನು ಥೂ! ಥೂ! ನಿನ್ನಕೂಡ ಮಾತಾಡಿದ್ದು ಮತ್ತಿಷ್ಟು ಮೈಲಿಗೆಯಾಯಿತು. ಮೈಕೊರೆಯುವ ಚಳಿಯಲ್ಲಿ ಮತ್ತೊಮ್ಮೆ ನೀರಲ್ಲಿ ಮುಳಗಿ ಬರಬೇಕಾಯಿತು. ಸರಿ ಆಚಗೆ ಅಸ್ಪೃಶ್ಯಾ!

**ಜೀವನ—** **ಪದ**

ಮನಶುದ್ಧಿಯಿಲ್ಲದವಗೆ ಮಂತ್ರದ ಫಲವೇನು?
ತನುಶುದ್ಧಿ ಇಲ್ಲದವಗೆ ತೀರ್ಥದ ಫಲವೇನು?
ಮಿಂದಲ್ಲಿ ಫಲವೇನು ಮೀನು ಮೊಸಳೆಯಂತೆ!
ನಿಂದಲ್ಲಿ ಫಲವೇನು ಶ್ರೀಶೈಲದಾ ಕಾಗೆಯಂತೆ!
ಹೊರಗೆ ಮಿಂದು ಒಳಗೆ ಮೀಯದವರ ಕಂಡು
ಬೆರಗಾಗಿ ನಗುತಲಿದ್ದ ಪುರಂದರವಿಠಲ.

ಮಡಿ-ಮೈಲಿಗೆಗಳ ವಿಷಯವಾಗಿ ಪುರಂದರದಾಸರು ಮುತ್ತಿನಂತಹ ಮಾತನ್ನುಹೇಳಿದ್ದಾರೆ. ಹೊಟ್ಟೆಯೊಳಗೆ ಮಲ-ಮೂತ್ರಗಳನ್ನಿಟ್ಟುಕೊಂಡು ಮೇಲೆ ಶರೀರ ತೊಳೆದರೆ ಶುದ್ಧವಾಗುವದೇ ಮಾನವರನ್ನು ನಿಂದಿಸುತ್ತ ಮಡಿ ಮಡಿ ಎಂದು ನುಡಿಯುತ್ತಹೋದರೆ ದೇವರು ಮೆಚ್ಚುವನೇ ಮಾತಿಗೆ ಮೈಲಿಗೆಯುಂಟೆ?

**ಶಿಲಾಕಾಂತ—** ಕ್ರಿಯಾ-ಕರ್ಮ, ಸ್ನಾನ-ಸಂಧ್ಯಾ, ಜಪ-ತಪಗಳಿಂದ ಮನಶುದ್ಧಿ, ತನುಶುದ್ಧಿಯಾಗುವದು. ಇದುವೇ ಆಚಾರವಂತರ ಅಂತ ರಂಗದ ವಿಚಾರ. ಈ ವಿಚಾರದಿಂದ ದೇವದರ್ಶನವಾದರೆ ದೇವರು ಮೆಚ್ಚು ವನು. ಇದು ಮಹಾ ಜ್ಞಾನಿಗಳ ಮತ. ಈ ಮತದತ್ತ ಸಾಗಿದರೆ ಸ್ವರ್ಗ ಇದನ್ನು ಬಿಟ್ಟರೆ ನರಕ! ಕೀಳು ಸಮಾಜದವನಾದ ನಿನಗೆ ಧರ್ಮದ ಮರ್ಮ ತಿಳಿಯುವದೆಂತು!

**ಜೀವನ—** ನಾಕ! ನರಕ!! ಅಯ್ಯಾ ಎಂದೊಡೆ ಸ್ವರ್ಗ! ಎಲವೊ ಎಂದೊಡೆ ನರಕ! ಸತ್ಯ-ಮಿಥ್ಯಗಳ ಅರ್ಥವನು ಅರಿತರೆ ಮಹಾತ್ಮರ ತತ್ವ ಗಳು ಮನವರಿಕೆಯಾಗುವವು. ಈ ತತ್ವ ಬಿಟ್ಟದ್ದರಿಂದಲೆ ಮಾನವರಲ್ಲಿ ಉಚ್ಚ ನೀಚವೆಂಬ ಭೇದಭಾವಗಳು ಬೆಳೆದು ಮಾನವ ಸಮಾಜವನ್ನೇ ಕಗ್ಗತ್ತಲೆಯತ್ತ ನೂಕಿವೆ. ಕೀಳು ಸಮಾಜದ ಕಣ್ಣೀರು ಕಾಲುವೆಯಾಗಿ ಹರಿದರೂ ಉಚ್ಚ ಸಮಾಜಕ್ಕೆ ಕರುಣೆ ಬಾರದಾಗಿದೆ. ಹಿಂದು ಧರ್ಮದಲ್ಲಿ ಮಾನವರನ್ನು ಮಾನವರಂತೆ ಕಾಣದ ದಾನವರು ಇರುವವರೆಗೆ ಜಾತಿಯ ಮೇಲು ಕೀಳು ಎಂಬ ಭೇದಭಾವ ಅಳಿಯಲಾರದು. ಜಗತ್ತಿನಲ್ಲಿರುವದು ಒಂದೇ ಒಂದು ಮನುಷ್ಯ ಜಾತಿ ದಯಾದೃಷ್ಟಿಯಿಂದ ಸರ್ವಜೀವಿಗಳನ್ನು ಕಾಣುವದೇ ಧರ್ಮ. ಸದ್ಗುಣವುಳ್ಳ ಮಾನವನು ಮೇಲು. ಅಧರ್ಮ ದಿಂದ ನಡೆಯುವವನು ಕೀಳು.

**ಶಿಲಾಕಾಂತ—** ಎಲೋ? ಎಲೋ? ಬ್ರಹ್ಮಜ್ಞಾನಿಯಾದ ನನಗೆ ಭೋದಿಸುವಿಯಲ್ಲೋ? ಜಾತಿಮತಗಳ ಮರ್ಮವನರಿಯದ ಮೂರ್ಖ ನೆಂದು ತಿಳಿದಿರುವಿಯೇನು? ಥೂ! ಥೂ! ಅಲ್ಪ ವಿದ್ಯಾ ಮಹಾಗರ್ವಿ ಯಂಬಂತೆ ಸಾಲಿ ಕಲಿತಮಾತ್ರಕ್ಕೆ ಶಾಸ್ತ್ರದ ಗುಟ್ಟು ತಿಳಿಯುವದೆಂತು? ಪತೀತನಾದ ನೀನು ಪಾವನರಂತೆ ನಟಿಸಿದರೆ ಏನಾಗುವದು? ಅಂತ್ಯಜ ಸಮಾಜದಲ್ಲಿ ಹುಟ್ಟಿದ ನಿನಗೆ ಅದೆಷ್ಟು ಅಹಂಕಾರವೊ.

**ಜೀವನ—** [ಸ್ವಗತ] ಅಂತ್ಯಜ ಸಮಾಜ! ಭಗವಂತಾ ಈ ಬ್ರಹ್ಮ ಜ್ಞಾನಿಗೆ ಅಂತ್ಯಜ ಸಮಾಜದ ಅರಿವನ್ನು ಮಾಡಿದ್ದರೆ ಅದೆಷ್ಟು ಒಳಿತಿತ್ತು

[ಸ್ವ] ಹುಟ್ಟಿನ ಗುಟ್ಟು ಬೇರೆ ಕುಲದ ಕಟ್ಟುಬೇರೆ. ಕಾಯಕವೇ ಕುಲವಾಗಿ ಮೇಲು ಕೀಳಿನ ಚಲನವಲನವಾಗಿ ಭಾರತೀಯರ ಮನ ಮಲೀನವಾಯಿತು. ಕಾಯಕವೇ ಕೈಲಾಸವೆಂದು ಹೇಳಿದ ಶಿವಶರಣರ ಸಂದೇಶ ಸುಳ್ಳೆ. ಜಾತಿ ಜನನಕ್ಕೆ ಸಂಬಂಧಪಡದೆ ಗುಣಕ್ಕೆ ಸಂಬಂಧಿಸಿದೆ. ತನುವಿನ ಕೋಪ ಹೊಲೆಯಲ್ಲವೇನಯ್ಯ ಮನಸ್ಸಿನ ವಂಚನೆ ಹೊಲೆಯಲ್ಲವೇನಯ್ಯ ಪರವಸ್ತುವಿನ ಆಶೆ ಹೊಲೆಯಲ್ಲವೇನಯ್ಯ ಎಂದು ಮಹಾತ್ಮಾ ಬಸವಣ್ಣನವರು ಹೊಲೆಯರಾರೆಂಬುದನ್ನು ಹೇಳಿದ್ದಾರೆ. ಭಾರತೀಯರಿಗೆ ಕುಲವೊಂದಲ್ಲದೆ ನೂರಿನ್ನೂರು ಜಾತಿಗಳಿಲ್ಲ.

**ಶಿಲಾಕಾಂತ**— ಅಯ್ಯೋ! ಉನ್ಮತ್ತಾ ಪುನಃ ಪುನಃ ನನಗೆ ಬುದ್ಧಿ ಹೇಳಲು ಪ್ರಾರಂಭಿಸಿರುವಿಯಲ್ಲೊ? ಶೂದ್ರನಾದ ನಿನಗೆ ಎಷ್ಟು ಹೇಳಿದರೂ ಕಡಿಮೆ. ನಿಮ್ಮ ಆಚಾರ– ವಿಚಾರ ರೀತಿ–ನೀತಿಗಳು ಹೊಲೆಯರೆಂದು ನಿಮ್ಮನ್ನು ಕೈಮಾಡಿ ತೋರಿಸುವವು. ಸರಿ ಆಚೆಗೆ ಶೂದ್ರಾ! ನಿನ್ನ ಮಾರಿಗೆ ಬೆಂಕಿಹಚ್ಚಲಿ. ವ್ಯೆಲಿಗೆ ವ್ಯೆ-ಲಿ-ಗೆ (ಹೋಗುವನು)

**ಜೀವನ**— **ಪದ**

ರಾಗ– ಭೀಮಪ್ಲಾಸ ತಾಳ– ತ್ರಿವಿಟೆ

ಅಂತಜರಕಾಯೋ। ಕರುಣಿ ಸುಡುತಿಹುದು ಕುಲಜರ ನುಡಿಯಾ ||೧||
ಕೀಳು ವಿಚಾರ ನೀಗಿಸೋ ಹರಿಸೋ। ಪಾಮರ ಪರಿಪಾಲಿಸೋ
ದಯಾಘನಾ ||೨||

ಶಿವ! ಶಿವಾ!! ಉಚ್ಚವರ್ಣದವರ ದಬ್ಬಾಳಿಕೆಯಿಂದ ಅಬಲರು ದರಿದ್ರರೂ ಆದ ಅಸ್ಪೃಶ್ಯರೆನ್ನಿಸಿಕೊಳ್ಳುವ ನಮಗೆ ಕಷ್ಟಗಳೇ ಕೈದೀಪಗಳಾಗಿವೆ. ಸರ್ವ ಜೀವಿಗಳ ತಂದೆಯಾದ ದೇವಾ! ನಿನ್ನ ಮನೆಯಲ್ಲಿ ಇದೇ ನ್ಯಾಯವೇ ಎಲ್ಲರಂತೆ ನಮಗೂ ನೀನು ಜನ್ಮಕೊಟ್ಟಿಲ್ಲವೇ ಮಾನವರೆಲ್ಲರೂ ನಿನ್ನ ಮಕ್ಕಳಲ್ಲವೇ ನಿನ್ನ ಮಕ್ಕಳಲ್ಲಿ ಕೀಳು-ಮೇಲು ಎಂಬ ಜಗದ ನುಡಿಯನ್ನು ಕೇಳಿ ಕಿವುಡನಾಗಿರುವೆಯಾ? ನೀನೇ ಮೌನತಾಳಿದರೆ ನಮ್ಮನ್ನು ರಕ್ಷಿಸುವವರಾರು. ಹಾ ಅಸ್ಪೃಶ್ಯತಾ ನಿವಾರಣೆ! ವ್ಯರ್ಥರೋಧನೆ!!

**ಇಂದುಧರ**— (ಪ್ರವೇಶ) ಜೀವನಾ! ಬೀದಿಯಲ್ಲಿ ಏಕಾಂಗಿಯಾಗಿ ಮೌನತಾಳಿರುವ ಕಾರಣ!

**ಜೀವನ**— ಕಾರಣ! ಎಲ್ಲವೂ ವಿನಾಕಾರಣ!

**ಇಂದುಧರ**— (ಸ್ವ) ಜೀವನನ ಹೃದಯದ ಅನಿಲವು ಅವಾಸ್ತವ ರೀತಿಯಲ್ಲಿ ಚೀತರಿಸಿಕೊಂಡಿದೆಯಲ್ಲ. (ಪ್ರ) ಜೀವನಾ! ಮೌನದ ವೃತ್ತಾಂತವನ್ನು ಮಮತೆಯ ಮಿತ್ರನಿಗೆ ಹೇಳಲಾರೆಯಾ?

**ಜೀವನ**— ವೃತ್ತಾಂತ! ವೃತ್ತಾಂತ!! ಮಾನವನು ಮಾನವನಾಗಿ ಕಾಣದ ಈ ಜಗಕೆ ಮೌನದ ವೃತ್ತಾಂತ!

**ಇಂದುಧರ**— ಅರ್ಥವಾಗದ ನೀನಾಡುವ ನುಡಿಗಳು ಹೃದಯ ನಡುಗಿಸುವವು ಬೇಗಹೇಳು.

**ಜೀವನ**— ಹೊಲೆಯರ ಜ್ಯಾತಿಯಲ್ಲಿ ಹುಟ್ಟಿ! ಹೃದಯತಾಪ ಹೊತ್ತಿಸಿಕೊಳ್ಳಲಾರೆ ಬೇಡ! ಬೇಡ!!

**ಇಂದುಧರ**— ಏನಿದು ಅಸಂಬದ್ಧ ಜೀವನನ ಮುಖದಿಂದ.

**ಜೀವನ**— ಅಸಂಬದ್ಧವಲ್ಲ ಸುಸಂಬದ್ಧ!

**ಇಂದುಧರ**—ಜೀವನಾ! ಬಿಚ್ಚಿಡು ನಿನ್ನ ಹೃದಯದ ಹಂಬಲವನ್ನು ತಣಿಸುವೆನು ತನು-ಮನ-ಧನಸಮೇತ ತಾಳ್ಮೆಯಿಂದ ಬಂಧುವೆಂದು ತಿಳಿದು ಬೆಂದ ಹೃದಯದ ಸಂಗತಿಯನ್ನು ಅಂದವಾಗಿಟ್ಟು ಮನಾನಂದಗೊಳಿಸು.

**ಜೀವನ**— ಬಂಧುಯಾರು? ಇಂದುಧರನು ಜೀವನನ ಬಂಧುವೇ! ಈ ಅಸ್ಪೃಶ್ಯನ ಬಂಧುವೇ! ಮುಟ್ಟಲಾರದ ಕುಲದಲ್ಲಿ ಹುಟ್ಟಿದ ಈ ಹೊಲೆಯನಿಗೆ ಬಂಧುವಿಲ್ಲ, ಬಳಗವಿಲ್ಲ, ಗೆಳೆಯರಿಲ್ಲ ಇಂದುಧರ! ನಾನು ಅಸ್ಪೃಶ್ಯ ಹೇಳಲಾರೆ ನನ್ನ ಕರ್ಮಕಥೆ.

**ಇಂದುಧರ**— ಜೀವನಾ! ಅಚ್ಚರಿಯಾಗುತ್ತಿದೆ. ಅಸ್ಪೃಶ್ಯ ಅಂತ್ಯಜನೆಂಬ ನಿನ್ನ ಮರುಮಾತಿನಿಂದ ಗೆಳೆತನವೆಂಬುದು ಒಂದು ಅಮೌಲ್ಯವಾದ ವರ. ಅಲ್ಲಿ ಮೇಲು-ಕೀಳು ಕುಲದ ಕಶ್ಮಲವಿಲ್ಲ. ಬಡವ-ಬಲ್ಲಿದ

ರೆಂಬ ಸೊಲ್ಲಿಲ್ಲ. ಸ್ವಾಮಿ-ಸೇವಕರೆಂಬ ಭೇದಭಾವವಿಲ್ಲ. ನೀ ತೆಗೆದ ಬಿಸಿಯುಸಿರಿನ ಝಳ ತಾಕಿ ಮನ ತಳಮಳಿಸುತಿದೆ. ನರನರಗಳಲ್ಲಿ ಹರಿವ ನೆತ್ತರ ಹೆಪ್ಪುಗಟ್ಟುತ್ತಿದೆ. ಜೀವನಾ! ಇಂದೇಕೆ ದುಃಖದ ಧ್ವನಿ!

**ಜೀವನ**— ದುಃಖದ ಧ್ವನಿ! ಧನಿಕರ ದಬ್ಬಾಳಿಕೆಯಿಂದ ಗಾಯಗೊಂಡು ನರಳುವ ದಲಿತರ ದುಃಖದ ಧ್ವನಿ! ಜಾತಿಯ ಜ್ವಾಲೆಯಿಂದ ಬೆಂದ ಅಂತಜರ ದುಃಖದ ಧ್ವನಿ!! ಒಕ್ಕೊರಲಿಂದ ಕೂಗುವ ಅಸ್ಪೃಶ್ಯರ ಧ್ವನಿ ಭಾರತದ ಬಾಳಬಯಲಿಗೆ ಅಪ್ಪಳಿಸಿ ಸಿಡಿದೇಳುವ ಪ್ರತಿಧ್ವನಿ!! ಹೆಚ್ಚೇನು ಹೇಳಲಿ ನಡದರೆ ನೆಲಕೆ ಹೊಲೆತನ. ಮುಟ್ಟಿದರೆ ಮಾತಾಡಿದರೆ ಮೇಲು ಕುಲಜರಿಗೆ ಮೈಲಿಗೆ. ಹೊಲೆಯ ಕುಲದ ನಾತ ಉಚ್ಚ ಕುಲಜರ ಮೂಗಿಗೆ ಬಡಿದರೆ ಮಿದುಳು ಮಜ್ಜಿಗೆಯಾಗಿ ಸಿಡಿದೇಳುವವು. ಹೃದಯದಿಂದ ಕಡುನುಡಿಗಳು. ಹೆಚ್ಚು ಹೇಳಿದರೆ ಸಂತಾಪದುರಿಯಿಂದ ಕಾಯವು ಕುಸಿಯುತ್ತಿದೆ. ಬೇಡ ಈ ಪಾಪಿಯ ಸಹವಾಸ.

**ಇಂದುಧರ**— ಜೀವನಾ! ಸಹವಾಸ ಬೇಡೆಂಬ ಸೊಲ್ಲಿನಿಂದ ನಡುಗುತಿದೆ ಎನ್ನೆದೆ. ನೀ ತೆಗೆದ ಕಣ್ಣೀರಿನ ಕುದಿಯಲ್ಲಿ ಬೆಂದುಹೋಗುತಿದೆ ನನ್ನ ದೇಹ. ಸುಖ-ದುಃಖಗಳಲ್ಲಿ ಸಮಭಾಗಿಯಾಗುವದು ಸತ್ಯಸ್ನೇಹಿತನ ಆತ್ಮಲಕ್ಷಣ! ಅಸ್ಪೃಶ್ಯನೆಂದು ಬಿಸಿಯುಸಿರು ತೆಗೆಯುವದು ವಿಲಕ್ಷಣ!! ಸ್ವತಂತ್ರವಾದ ಭಾರತದಲ್ಲಿ ಜಾತ್ಯಾತೀತ ರಾಷ್ಟ್ರ ನಿರ್ಮಾಣ ಕಾರ್ಯ ನಡೆದಿರುವಾಗ ಕುಲದಮಾತೇಕೆ? ನಿಟ್ಟು ನಿಟ್ಟುಗಳಲ್ಲಿ ದೃಷ್ಟಿ ಚಲ್ಲಿ ನೋಡು. ಜ್ಯಾತ್ಯಾತೀತ ಸಮಾಜರಚನೆಯ ಶಾಂತ ಛವಿಸೂಸುತಿದೆ,

**ಜೀವನ**— ಆಧ್ಯಾತ್ಮಿಕ ತತ್ವಗಳರಾಶಿಯಲ್ಲಿ ಆತ್ಮದ ಪರಿಪೂರ್ಣತೆಯನ್ನು ಒಪ್ಪಿದರೂ ಕೃತಿಯಲ್ಲಿ ಬರಲು ಅಸಮರ್ಥವಿದೆ ಜಾತ್ಯಾತೀತ ಸಮಾಜರಚನೆಯು. ವಿಶ್ವದಲ್ಲಿ ಹುಟ್ಟಿಬಂದ ಅಸ್ಪೃಶ್ಯರು ನಿತ್ಯ ಕಣ್ಣೀರು ಕರೆದು ಸಾಯಲೆಂದು ಬ್ರಹ್ಮಬರವಿದ್ದರೆ ತಪ್ಪಿಸುವವರಾರು.

**ಇಂದುಧರ**— ಜೀವನಾ! ಇಂದೇಕೆ ನಿನ್ನ ಹೃದಯದಿಂದ ನಿರಾಶೆಯ ನುಡಿಗಳೇಳುತಿವೆ.

**ಜೀವನ**— ಕಾಲೇಜಕ್ಕೆ ಹೋಗುವಾಗ ಮಡಿಯಿಂದ ಹೊರಟ ಶಿಲಾಕಾಂತ ಪಂಡಿತರೊಡನೆ ನಾನು ಮಾತಾಡಿದ್ದು ಮೈಲಿಗೆಯಾಯಿತೆಂದು ಕಡುತರ ಕ್ರೋಧಕಾರಿ ಹೊಲೆಯ ಶೂದ್ರನೆಂದು ಜರಿದು ಹೋದಂದಿನಿಂದ ಹೃದಯಕ್ಕೆ ಹುಮ್ಮಸವಿಲ್ಲ.

**ಇಂದುಧರ**— ಜೀವನಾ! ಭಾರತದ ಜಾತಿಯ ಸಮಸ್ಯೆ ಒಡೆಯುಲಾರದ ಒಗಟಾಗಿದೆ. ಬಿಡಿಸಲಾರದಷ್ಟು ಗಡುಚಾಗಿದೆ. ಉಚ್ಚ ನೀಚವೆಂಬ ಭೇದ-ಭಾವ ದಯೆ-ಮಮತೆ ಮೊದಲಾದ ಸದ್ಭಾವನೆಗಳಿಗೆ ವಿರೋಧವಾಗಿದೆ. ಆದರೆ ಭಾರತವಿಂದು ಸ್ವತಂತ್ರವಾಗಿದೆ. ಈ ಸ್ವತಂತ್ರವಾದ ಭಾರತದಲ್ಲಿ ಎಲ್ಲರೂ ಸುಖವಾಗಿ ಜೀವಿಸಬೇಕಾಗಿದೆ ಅದಕ್ಕಾಗಿ ಸಮಾಜದಲ್ಲಿಯ ಆರ್ಥಿಕ ವಿಷಮತೆ ಅಳಿದು ಸಮಾನತೆಯ ಅರುಣೋದಯವಾಗುತ್ತಿದೆ. ಸುಶಿಕ್ಷಿತರಾದ ನಾವು ತಾಳ್ಮೆಯಿಂದ ಒಂದಾಗಿ ಮುಂದಾಗಿ ಮಾನವಧರ್ಮದ ತತ್ವ ತಿಳಿಸುತ್ತ, ಅಸ್ಪೃಶ್ಯತಾ ನಿವಾರಣೆ ಮಾಡಬೇಕು. ನಿರಂತರ ಪ್ರಯತ್ನವೇ ಜೀವನ. ಅನಂತವಾದ ಆತ್ಮವನ್ನು ಅನಂತವಾಗಿಯೇ ಸಾಧಿಸಬೇಕೆಂಬುವದು ನವಜೀವನದ ಸಿದ್ಧಾಂತ. ಈ ಸಿದ್ಧಾಂತದ ಧ್ಯೇಯಸಾಧನೆಗಾಗಿ ಈಗಲೇ ಸಾಗುವಾ ನಡೆ.



## ೨ ನೇ ಪ್ರವೇಶ

(ಸ್ಥಳ:- ಶಿಲಾಕಾಂತರ ಮನೆ ಕದ ಮುಚ್ಚಿದೆ)

**ಶಿಲಾಕಾಂತ**— (ಸ್ವಗತ) ಥೂ! ಥೂ!! ಇಲ್ಲೀನೂ ಇದೇನೆ!! ಗಡಿಬಿಡಿಯಿಂದ ಮಡಿಯಾಗಿ ಗುಡಿಗೆ ಹೋಗಬೇಕೆಂದರೆ ಕದವು ಮುಚ್ಚಿದೆ. ಹೊಸ ವಿಚಾರದ ಈ ಹುಡುಗಿಗೆ ಸಿಡುಕುತನ ಬಹಳ. ಸ್ನಾನ-ಸಂಧ್ಯಾವಂದನೆಗಳಮೇಲೆ ತಿರಸ್ಕಾರ! ಅಸ್ಪೃಶ್ಯರಿಗೆ ಪುರಸ್ಕಾರ!! ಪೂಜೆ-ಜಪ-ತಪಗಳ ಮಾತೆತ್ತಿದರೆ ಹುತ್ತಿನೊಳಗಿನ ಹಾವಿನಂತೆ ಫೂತ್ಕಾರ! ನನ್ನ ಮನೆಯಲ್ಲಿ ನನಗಿಲ್ಲ ಆದರ ಸತ್ಕಾರ! ಥೂ! ಥೂ!! ಈ ವಿಷಮ ಸಂಸಾರಕ್ಕೆ ಧಿಃಕಾರ! ಒಳಗೂ ಹೊರಗೂ ಇದೇನೆ ಕೊಂಡಿ ಮನಸ್ಸಿನ ಹೆಂಡತಿ ಒಲಿಸಿಕೊಳ್ಳುವದೆಂದರೆ ಬಲು ಕಷ್ಟ. ಇದು ನನ್ನ ಅದೃಷ್ಟ (ಪ್ರ) ಏ ಒಳಗ ಇದ್ದೀಏನಃ ಕದಾತೆಗಿ ಅಂದೆ.

**ಕಲ್ಲುಬಾಯಿ**— (ಒಳಗಿನಿಂದ) ಅದಾರು?

**ಶಿಲಾಕಾಂತ**— ನಾನೇ ನಾನು.

**ಕಲ್ಲುಬಾಯಿ**— ನಾನು ಅಂದರೆ!

**ಶಿಲಾಕಾಂತ**— ನಾನೇ ನಾನು ಗೊತ್ತಾಯಿತೋ ಇಲ್ಲೋ?

**ಕಲ್ಲುಬಾಯಿ**— ಓಹೋ ವೆಂಕುಬಾಯಿವರೇನು?

**ಶಿಲಾಕಾಂತ**— (ಸ್ವ) ಥೂ! ಥೂ!! ನನ್ನ ಸ್ವರಾ ಹೆಂಗಸಿನಂತೆ ಕೇಳಿರಬೇಕೆ? ಈ ಹಗರಿದೆಯ ಹುಡುಗಿಗೆ (ಪ್ರ) ಏನೆ ನನಗೆ ತಮಾಷೆ ಮಾಡುತ್ತೀಯಾ?

**ಕಲ್ಲುಬಾಯಿ**— ತಮಾಷೆ ಮಾಡುವ ಅಭ್ಯಾಸ ನನಗಿಲ್ಲ. ತಮಾಷೆ ಅನ್ನುವದು ಗೊತ್ತಿಲ್ಲ.

**ಶಿಲಾಕಾಂತ**— ಸ್ವರದಿಂದಲಾದರೂ ಗೊತ್ತಾಗುವದಿಲ್ಲವೇ?

**ಕಲ್ಲುಬಾಯಿ**-- ನಾನೇನು ಸಂಗೀತಗಾರಳಲ್ಲ. ಸ್ವರದ ಜ್ಞಾನ ನನಗಿಲ್ಲ ಅರಹುಚ್ಚರಂತೆ ಹೊರಗೆ ನಿಂತು ಹೀಗೇಕೆ ಮಾತಾಡುವಿರಿ. ನೀವಾರು? ಹೇಳ್ತಿರೋ ಇಲ್ಲೋ?

**ಶಿಲಾಕಾಂತ**— ಸಾಕಾಯಿತಪ್ಪಾ ಇವಳಸಲುವಾಗಿ (ಜೋರಿನಿಂದ) ನಾನೇ ನಾನು!

**ಕಲ್ಲುಬಾಯಿ**— [ಕದಾ ತೆಗೆದು] ಓಹೋ ತಾವೇ.

**ಶಿಲಾಕಾಂತ**— [ಕೋಪದಿಂದ] ಹೂಂ ನಾನೇ

**ಕಲ್ಲುಬಾಯಿ**— ಒಲೆಯಮೇಲೆ ಅನ್ನಕ್ಕಿಟ್ಟಿದ್ದೆ. ನಿಮ್ಮ ಸ್ವರವು ನನಗೆ ಸ್ಪಷ್ಟ ಕೇಳಿಸಲಿಲ್ಲ. ನೀವೇ ಅನ್ನುವದು ಗೊತ್ತಾಗಲಿಲ್ಲ. ಅದಕ್ಕೆ ಕದಾ ತೆಗೆಯುವದು ಸ್ವಲ್ಪ ತಡವಾಯಿತು. ಬೇಗ ಬಂದ್ರಿ ಗುಡಿಗೆ ಹೋಗಲಿಲ್ಲವೇ?

**ಶಿಲಾಕಾಂತ**— ಇಲ್ಲ ಕಲ್ಲು! ಗುಡಿಗೆ ಹೋಗುವಾಗ ಹೊಲಿಯರ ಚನ್ನನ ಮಗ ಎದುರಿಗೆ ಬಂದೇಬಿಟ್ಟ.

**ಕಲ್ಲುಬಾಯಿ**— ಬಂದರೇನಾಯಿತು?

**ಶಿಲಾಕಾಂತ**— [ಸಿಟ್ಟಿನಿಂದ] ಅತಾ ನನ್ನೊಡನೆ ಮಾತಾಡಿದಾ ಆದರಿಂದ ಮೈಲಿಗೆಯಾಯಿತು ತಿರುಗಿ ಸ್ನಾನಕ್ಕೆ ಬಂದೆ.

**ಕಲ್ಲುಬಾಯಿ**— ಪಾಪ! ಆ ಹೊಲೆಯರ ಚನ್ನನ ಮಗ ನಿಮ್ಮ ಕೂಡ ಮಾತಾಡಿದರೆ ಮೈಲಿಗೆಯಾಯಿತೇ? ಇವೆಲ್ಲ ಗೊಡ್ಡು ಆಚಾರ ನನಗೆ ಬೇಜಾರವೇ ಆಗಿದೆ.

**ಶಿಲಾಕಾಂತ**— ಅಲ್ಲೇ ನೀನೇ ಹೇಳು. ಹೊಲೆಯರು ಮುಟ್ಟಿದರೆ ಮಾತಾಡಿದರೆ ಮೈಲಿಗೆಯಾಗ್ತದೋ ಇಲ್ಲೋ?

**ಕಲ್ಲುಬಾಯಿ**— ಹೊಲೆಯರೆಂದರೆ ಅವರು ಮನುಷ್ಯರೆ. ಮನುಷ್ಯರು ಮನುಷ್ಯರನ್ನು ಮುಟ್ಟಿದರೆ ಮಾತಾಡಿದರೆ ಮೈಲಿಗೆಯಾಗಲಾರದು. ಮಡಿ-ಮೈಲಿಗೆಗಳು ಮನಸ್ಸಿಗೆ ಸಂಬಂಧವಿರುವವಲ್ಲದೇ ಶರೀರಕ್ಕಲ್ಲ. ಈ ಶರೀರ ಅನಿತ್ಯ ಅಶುದ್ಧ ಹೊಲಸು ಪದಾರ್ಥಗಳ ಭಾಂಡಾರ. ಇದರ

ಮೇಲೆ ನೀರು ಸುರುವಿದರೆ ಮಡಿಯೇ? ಮತ್ತೊಬ್ಬರು ಮುಟ್ಟಿದರೆ ಮೈಲಿಗೆಯೇ? ಇದು ಮನಸ್ಸಿಗೆ ಗಂಟುಬಿದ್ದಿರುವ ಅಜ್ಞಾನ. ಈ ಅಜ್ಞಾನದ ಬೆನ್ನುಹತ್ತಿದ ಜಾತಿಕೋತಿಗಳನ್ನು ಕಂಡರೆ ಕೋಪ ಬರುತ್ತದೆ. ಮನಶುದ್ಧಿ ಮಾಡಿಯಲ್ಲದೇ ತನುಶುದ್ಧಿಯಲ್ಲ. ಹೊಲೆಯರನ್ನು ಮುಟ್ಟಿದರೆ ಮೈಲಿಗೆಯಾಗಲಾರದು. ಸುಮ್ಮನೆ ಗುಡಿಗೆ ಹೋಗಿಬನ್ನಿ.

**ಶಿಲಾಕಾಂತ**— ಕಲ್ಲು! ನಿನ್ನ ಹೃದಯದ ಹೊದರಿನಲ್ಲಿ ಹುದುಗಿಕೊಂಡಿದೆ. ಹೊಲೆಯರನ್ನು ಮುಟ್ಟಿದರೆ ಮೈಲಿಗೆಯಾಗುವದಿಲ್ಲೆಂಬ ಹೊಲಸುವಿಚಾರ. ಮನಶುದ್ಧಿಯಾಗಬೇಕಾದರೆ ತನುಶುದ್ಧಿಯಾಗಬೇಕೆಂದು ವೇದಾಗಮಗಳು ಹೇಳುತ್ತಿವೆ. ಮೈಲಿಗೆಯಾದ ಈ ಶರೀರ ಮಡಿಯಾಗಬೇಕಾದರೆ ಸ್ನಾನಬೇಕು.

**ಕಲ್ಲುಬಾಯಿ**— ಈ ದೇಹ ಮಣ್ಣಿನಕೊಡಕ್ಕೆ ಸಮಾನವಾದುದು ಈ ದೇಹ ಬಿದ್ದಮೇಲೆ ವ್ಯರ್ಥ ಇದರ ಮೇಲೆ ನೀರು ಸುರುವಿದರೆ ಸ್ನಾನವಲ್ಲ. ದಾನಧರ್ಮ ಮಾಡುವದೇ ಸ್ನಾನ! ಇಂದಿನ ಯುಗದಲ್ಲಿ ಇದಕ್ಕದೆ ಮಾನ! ಮಾನವರನ್ನು ಮುಟ್ಟಬಾರದೆನ್ನುವ ದಾನವರದು ಆಗುತಿದೆ ದಹನ.

**ಶಿಲಾಕಾಂತ**— ಕಲ್ಲು! ಗೊತ್ತಿಲ್ಲ ನಿನಗೆ ಧರ್ಮದ ವಿಧಾನ! ಬುನಾದಿ ಕಾಲದಿಂದಲೂ ಹೊಲೆಯರು ಅಸ್ಪೃಶ್ಯರು. ಹೊಲೆ ಶಬ್ದ ಅಳಿಯಲು ಬಲ್ಲಿದರು ಬಲವಾದ ಗಲಾಟೆ ಎಬ್ಬಿಸಿದರೂ ಹಿಂದೂಧರ್ಮದ ಕಟ್ಟಳೆಯ ಅಡಿಗಲ್ಲು ಸಡಿಲಾಗಿಲ್ಲ.

**ಕಲ್ಲುಬಾಯಿ**— ಹೊಲೆಯರು ಯಾರೆಂಬುದು ನಿನಗೆ ಗೊತ್ತಿದೆಯೇ? ಮೋಸಮಾಡಿ ಮತ್ತೊಬ್ಬರ ಮನೆ ಹಾಳು ಮಾಡುವವರು ಹೊಲೆಯರು. ಸುಳ್ಳು ಲೆಕ್ಕವ ಬರೆದು ಬಡವರ ಕುತ್ತಿಗೆ ಕೊಯ್ಯುವವರು ಹೊಲೆಯರು. ಒಳ್ಳೆಯವರ ಸೋಗುಹಾಕಿ ಕಳ್ಳಸಂತೆ ಮಾಡುವವರು ಹೊಲೆಯರು. ಮಾನವರಲ್ಲಿ ಮೇಲು-ಕೀಳು ಎಂದು ಭೇದ ಮಾಡುವವರು ಹೊಲೆಯರು. ಇವರು ಅಸ್ಪೃಶ್ಯರು. ಹೊಲೆಯಸಮಾಜದಲ್ಲಿ ಜನಿಸಿದವರು ಹೊಲೆಯರಲ್ಲ, ಅವರು ಸ್ಪೃಶ್ಯರು.

**ಶಿಲಾಕಾಂತ**— ಮತಿಗೆಟ್ಟು ಮಾತಾಡುವ ನೀನು ಮಾನವಳಲ್ಲ. ದಾನವಳು [ಸ] ಮನೆಯಲ್ಲಿ ಹೆಂಡತಿಯ ಹುಚ್ಚಾಟ ಹೆಚ್ಚಾದರೆ ಮಾಡಿದ ಅಡಿಗೆ ಕೆಡುವದು, ಮನಸಿನ ಗಡಿಬಿಡಿ ಹೆಚ್ಚಾಗುವದು, ಸಂಸಾರ ಹಾಳಾಗುವದು ನಿಶ್ಚಿತ. [ಪ್ರ] ಕಲ್ಲು! ನಿನ್ನ ಅವಿಚಾರದಿಂದ ಅನಾಚಾರದ ಆರಾಧನೆ ನಡೆದದೆ ನನ್ನ ಮನೆಯಲ್ಲಿ. ವಿಚಾರವಿಲ್ಲದೆ ನಿನ್ನನ್ನು ಮಾಡಿಕೊಂಡದ್ದು ನನ್ನದೆ ತಪ್ಪು.

**ಕಲ್ಲುಬಾಯಿ**— ಮಾತುಮಾತಿಗೆ ಮಡಿ-ಮೈಲಿಗೆಯೆಂದು ಮನಿಗೆ ಬಂದು ನೂರು ಕೊಡ ನೀರು ಸುರಿವಿಕೊಳ್ಳುವ ನಿಮ್ಮನ್ನು ಮಾಡಿಕೊಂಡದ್ದು ನನ್ನದೆ ತಪ್ಪು.

**ಶಿಲಾಕಾಂತ**— ನಿನ್ನ ತಪ್ಪು ಅಲ್ಲ. ವರದಕ್ಷಿಣೆಯ ಆಶೆ ಹೆಚ್ಚಿ ವಿಚಾರವಿಲ್ಲದ ನಿನ್ನನ್ನು ಆಚಾರವಂತನಾದ ನನಗೆ. ಗಂಟುಹಾಕಿದ್ದು ನಿಮ್ಮಪ್ಪನ ತಪ್ಪು. ಆಗುತಿದೆ ಮಾತುಮಾತಿಗೆ ಅವನ ನೆಪ್ಪು.

**ಕಲ್ಲುಬಾಯಿ**— ನಮ್ಮಪ್ಪಗ ಹೋಗಬೇಡ್ರಿ ಪಾಪಾ ಮಾಡೀನೀ ಅಂತ ಈ ಮನಿಗೆ ಬರಬೇಕಾಗೇದ ನಿತ್ಯ ಲಗಳಿ ಎತ್ತಿನಂತೆ ನೀರು ಹೊತ್ತು ಹೊತ್ತು ಸತ್ತುಹೋಗುವದು ನನ್ನ ಅದೃಷ್ಟ. ಪಶುಗಳಿಗಿಂತಲೂ ಕೀಳಾಗಿ ಕಾಣುವ ಪುರುಷಧರ್ಮ ಒಳ್ಳೇ ವಿಚಿತ್ರ! ತೆಗೆಯಬೇಡ್ರಿ ನಮ್ಮಪ್ಪನ ಹೆಸರು ಮಾತ್ರ! ನೀರು ತರುವದು ಆಗುವದಿಲ್ಲ ನನ್ನಿಂದ [ಹೋಗುವಳು]

**ಶಿಲಾಕಾಂತ**— ಥೂ! ಥೂ!! ಇಲ್ಲೀನು ಇದೇನೆ? ಗ್ರಹಚಾರವೇ ಕೆಟ್ಟುಹೋಗೇದ. ಹೊಲೆಯರನ್ನು ಯಾಕೆ ಮುಟ್ಟಿಸಿಕೊಳ್ಳಬಾರದೆಂಬ ನೂತನತತ್ವ ನನ್ನ ಮನೆಯೊಳಗೆ ತಲೆಯೆತ್ತಿ ನಿಂತಿದೆ. ನಮ್ಮಂಥ ಆಚಾರವಂತರು ಬಾಳಿ ಬದುಕುವದು ಬಲು ಕಷ್ಟ. ಮಹಧೀಶ್ವರಾ ಬೇಗ ನಮ್ಮಂಥವರನ್ನು ಮರೆಮಾಡೋ?



## ೩ ನೇ ಪ್ರವೇಶ

[ಸ್ಥಳ:— ನೀರಿಗೆ ಹೋಗುವ ರಸ್ತೆ] [ಸಮಯ:— ಮುಚ್ಚಂಜೆ]

**ಇಂದುಧರ—** ಪುಣ್ಯಮಯವಾದ ನಮ್ಮ ಭಾರತದಲ್ಲಿ ಎಲ್ಲ ಬಗೆಯ ಸಂಪತ್ತಿದೆ. ಮತ-ಪಂಥಗಳ ನೆವದಲ್ಲಿ ಬೇಡಿಕೆಗಳು ಬಾನೆತ್ತರ ಬೆಳೆಯಹತ್ತಿವೆ. ಸ್ವಾರ್ಥ ತಲೆಯೆತ್ತಿ ನಿಂತಿದೆ. ಹಿಂಸೆ ಹೆಡೆ ಎತ್ತಿದೆ. ಅನಂತ ಸಮಸ್ಯೆಗಳು ತಲೆದೋರಿ ಭಾರತೀಯರ ಬಾಳು ಹಸನಾಗುವಬದಲು ಹದ ಗೆಟ್ಟಿದೆ. ಇದಕ್ಕೆ ಅನೇಕ ಮತ-ಪಂಥಗಳು ಕಾರಣಗಳಾಗಿವೆ. ಇಂದು ಭಾರತಿಯರೆಲ್ಲರೂ ಒಂದು. ಬಾಳು ಒಂದು. ಬದುಕು ಒಂದು. ಕುಲ ಒಂದು ಎಂಬ ಭಾವನೆ ಬೆಳೆಯಬೇಕು. ಅಸ್ಪೃಶ್ಯ ನಿವಾರಣೆಯ ಕೂಗು ಎಲ್ಲರ ಹೃದಯದಲ್ಲಿ ಮಿಡಿಯಬೇಕು. ಮಾನವ ಸಮಾನತೆಯ ತತ್ವ ನಡೆ-ನುಡಿಗಳಲ್ಲಿ ಪ್ರತಿಬಿಂಬಿತವಾಗಬೇಕು. ಇದೆನ್ನ ಆಶೆ. (ಮುಂದಕ್ಕೆ ಸಾಗಿ ಆಶ್ಚರ್ಯದಿಂದ) ಹಾ! ಯಾರು? ಈ ಊರ ಸಾವುಕಾರ ಸುರೇಶ! ಇತ್ತ ಬರಲು ಕಾರಣ! ಮರೆಯಲ್ಲಿ ನಿಂತು ನಿರೀಕ್ಷಿಸುವೆ.

**ಸುರೇಶ—** (ಸ್ವ) ಮನೆಯಂಗಳದಲ್ಲಿ ನಿಂತು ಕಳ್ಳತನದಿಂದ ನೋಡಿದ ಆ ಕಣ್ಣುನೋಟ, ಚಿಗುರಿನಂತಹ ಚೆಂದುಟಿ, ಚಲುವಿಕೆಯಿಂದ ಚಲ್ಲುವರಿದ ಚನ್ನಮಲ್ಲಿಗೆಯ ಹೂವಿನಂತಹ ಮುಖಕೆ ಮೆಚ್ಚಿ ಹುಚ್ಚಾಗಿ ದ್ದೇನೆ. ಬೆಡಗಿನ ಬಾಲೆ ಹೊಲೆಯರ ಹುಡಿಗಿ ಸೀಲೆಯನ್ನು ಕಂಡಾಗಿನಿಂದ ಕಣ್ಣಿಗೆ ನಿದ್ರೆಯಿಲ್ಲ ಮನಕೆ ನೆಮ್ಮದಿಯಿಲ್ಲ. ಪತೀತರಲ್ಲಿ ಪದ್ಮಿನಿಜಾತಿಯ ಹೆಣ್ಣು ಜನಿಸುವದೆಂಬುದು ನಿಜ. (ಆಶ್ಚರ್ಯದಿಂದ) ಹಾ! ನೀಲಾ ನೀರಿಗೆ ಹೊರಟಿಹಳು. ಸಂಜೆಯವೆಣ್ಣು ನನಗಾಗಿ ಕರಿಹೊದಿಕೆಯಿಂದ ಜನತೆ ಯನ್ನು ಮರೆ ಮಾಡುತಿಹಳು ಯೋಗ್ಯ ಸಮಯ. (ಸೀಲಾ ಬಗಲಲ್ಲಿ ಕೊಡ ಹಿಡಿದುಕೊಂಡು ಬರುವಳು) ನೀಲಾ! ನಿಲ್ಲು ನಿನಗಾಗಿ ಬಂದಿರುವೆ ನಾನಿಂದು.

**ನೀಲಾ**— (ಅಂಜಿ) ನನಗಾಗಿ ನೀವೇಕೆ ಬಂದಿರಿಂದು?

**ಸುರೇಶ**— ನೀಲಾ! ಮುಟ್ಟಲಾರದ ಕುಲದಲ್ಲಿ ಹುಟ್ಟಿಸಿಹನು ಆ ಬೊಮ್ಮನು ಮುಟ್ಟಿದರೆ ಮಾಸುವದೆಂದು ನಿನ್ನನ್ನು. ಮುಟ್ಟಿ ಮೊದಲಿಸಿ ನಿನ್ನ ಬಾಳನ್ನು ತಿಳಿ ಮಾಡಲು ಕಳುಹಿದನು ಕಾಮನು ನನ್ನನು.

**ನೀಲಾ**— ಕಾಮನೆಂದರೆ ಕ್ರೋಧ ಉಕ್ಕೇರಿ ಬರುತ್ತಿದೆ. ಕಾಮ ನಿಗಿಲ್ಲ ಕರುಣೆಯ ಕರುಳು. ಹೊಲೆಯ ಕುಲದಲ್ಲಿ ಹುಟ್ಟಿ ಬೆಳೆದ ಈ ಅನಾ ಥಳ ಬಾಳು ತಿಳಿಯಾಗಲಾರದು. ಕಾಮನ ದೂತನಾದ ನಿನ್ನಿಂದ....

**ಸುರೇಶ**— ಹೊ ಲೆ ಯ ಳೆಂ ದು ಬಿಸಿಯುಸಿರು ಕರೆಯದಿರು ಕುಮಾರಿ. ಧರ್ಮದ ದುರಾಭಿಮಾನ ದೂಡಿ ನಿನ್ನ ಬಾಳಿನಲ್ಲಿ ಸಮರಸವಾಗಿ ಜೀವಿಸುವ ಸದಿಚ್ಛೆ.

**ನೀಲಾ**— ಪತೀತರನ್ನು ಪಾವನರು ಪಶುಗಳಿಗಿಂತಲೂ ಕೀಳಾಗಿ ಕಾಣುವಾಗ ಅದಾವ ಸದಿಚ್ಛೆ ತಂದೆ.

**ಸುರೇಶ**— ತಂದೆ! ತಂದೆ!! ಎಂಬ ಮರುಮಾತಿನಿಂದ ಕರಗಿ ನೀರಾಗುವದು ನಿನ್ನಮೇಲಿನ ಕರುಣೆ.

**ನೀಲಾ**— ಸಿರಿವಂತರ ಮನೆಯಂಗಳ ಗೂಡಿಸಿ ಬಂದನ್ನದಿಂದ ಬೆಳೆದ ಬಡ ಹೊಲತಿಯ ಮಗಳು ನಾ. ಕುಲಜರ ಕರುಣೆಯ ನೆರಳಿನಲಿ ಜೀವಿಸುವ ಕೀಳುಕುಲದ ಕುವರಿ ನಾ. ದೀನ ದಲಿತರು ಧನಿಕರಿಗೆ ತಂದೆ ಯೆಂದರೆ ಕರುಣೆ ಕಾಲುವೆಯಾಗಿ ಹರಿಯುವದು. ತಂದೆ ತಾಯ್ತನದ ಕರುಳಿನಿಂದ. ತಂದೆಯೆಂದರೆ ನಿಮ್ಮ ಹೃದಯದ ಕರುಣೆ ಕರಗಿ ನೀರಾಗು ವದು ಇಂದೇಕೆ?

**ಸುರೇಶ**— ಪರರ ಮನೆಯಂಗಳ ಗೂಡಿಸುವಾಗ ಧೂಳಿಯಿಂದ ಮಾಸಿರುವದು ಬಳ್ಳಿಯಂತಹ ನಿನ್ನ ದೇಹ. ಅದಕಾಗಿ ಮನ ತಳಮಳಿಸುತಿ ಹುದು. ತಂದೆಯೆಂಬ ಮರುಮಾತಿನಿಂದ ಮತ್ತೆನ್ನ ಮನ ಹಿಂಜೆಗ್ಗುತಿ

ಹುದು. ನೀಲಾ! ನಿನ್ನ ಚಲ್ವಿಕೆಯ ಕಿರಣಗಳು ಕಿಕ್ಕಿರಿದು ಹೃದಯವ ಹೊಕ್ಕು ಜಲಕ್ರೀಡೆಯಾಡಲು ಕಾಡುತಿಹವು. ಶೃಂಗಾರ ಮಂಜರಿಯೇ ತಂದೆಯೆಂದು ಅನ್ನದಿರು ಇನ್ಮುಂದೆ.

**ನೀಲಾ**— ಹೊಲೆಯ ಕುಲಜರಿಗೆ ಅನ್ನ ಕೊಡುವ ನೀವು ತಂದೆಯಲ್ಲವೇ? ನಿಮ್ಮಂಗಳ ಧೂಳಿಯಿಂದ ಬದುಕುವ ಪತೀತರ ದೇಹ ಮಾಸಿದರೇನು ಮಡಿಯಾದರೇನು? ನಿಲ್ಲಲು ನೆರಳಿಲ್ಲ. ಕುಡಿಯಲು ನೀರಿಲ್ಲ. ಉಣಲು ಅನ್ನವಿಲ್ಲ. ಆಶೆಯ ಬೆಳಕಿಲ್ಲ. ನಿರಾಶೆಯ ಕರಿಹೊದಿಕೆ ಹಾಸಿದೆ. ಈ ಹೊಲೆಯ ಸಮಾಜದಮೇಲೆ.

**ಸುರೇಶ**— ಬಿಸಿಯುಸಿರು ಕರೆಯದಿರು ನೀಲಾ! ನಿನ್ನ ಬೀಳಾದ ಬಾಳಿಗೆ ನೆರಳು ನೀರು ಕೊಡಲು ಸಿರಿಯನ್ನೇ ಸೂರೆಗೊಂಡ ಬಂಗ್ಲೆಯು ನಿಂತಿಹುದು. ನಿನ್ನ ಮೇಲುನಗೆಯ ರತಿಕಲಾ ಕಾಂತಿಗೆ ಸಿಂಗಾರ ಮಾಡಲು ಮುಂದಾಗಿರುವೆ.

**ನೀಲಾ**— ಸಿಂಗಾರದ ಮಂಜಿಲ್ಲ. ಮತ್ತಾವದರ ನಂಜಿಲ್ಲ. ಮಾನದ ಅಂಜಿಕೆ ಆವರಿಸುತಿದೆ ಸಂಜೆಯಾಗುತ ಬಂತೆಂದು. ಕಾಮ ಕುಚೇಷ್ಟೆಯ ಮಾಡಿ ಮನ ಗುಂಜು ಮಾಡದಿರು. ನಾನಿನ್ನು ಹೋಗುವೆ ತಂದೆ.

**ಸುರೇಶ**— ಸಂಜೆಯಾಯಿತೆಂದು ಮನ ಹಿಂಜರಿಯದಿರಲಿ ನೀಲಾ! ಹರಿಜನ ಕುಮಾರಿಯರು ಸೂಳೆಯರಾಗಿ ಸಿರಿವಂತರಮುಂದೆ ಸುಳಿಸುಳಿದು ಹಣ ಸೆಳೆದು ಸುಖದ ಉಯ್ಯಾಲೆಯಾಡುವಾಗ ಮಾನದ ಅಂಜಿಕೆ ಮನವೇಕೆ ಮುಟ್ಟಿತು.

**ನೀಲಾ**—ಸೂಳೆಯ ಬಾಳಿಲ್ಲ. ಒನಪು ಒಯ್ಯಾರಗಳಿಲ್ಲ. ಹಣ ಸೆಳೆಯುವ ಹೊಳಪಿಲ್ಲ. ಮೇಲೂ-ಕೆಳಗೂ ದೇಹದೊಳಗೂ–ಹೊರಗೂ ಮಾಸಿದ ಮನವಿಲ್ಲ. ಕುಲವತಿಯ ಮಗಳು ನಾ. ಕಾರಿರುಳು ಬರುತಿದೆ ಭಯವು ಆವರಿಸುತಿದೆ ದಾರಿ ಬಿಡು ತಂದೆ.

**ಸುರೇಶ**— ನಿನ್ನ ಚಲುವಿಕೆಗೆ ಮೆಚ್ಚಿ ಬಂದಿರುವ ನನ್ನ ಮನ ಚಿವುಟಿ ಹೋಗದಿರು ನೀಲಾ! ನನ್ನಿಚ್ಛೆಯಂತೆ ನಡೆದರೆ ನನ್ನ ಸಂಪತ್ತು ಹರಿದುಬಂದು ನಿನ್ನ ಪುರುಕ ಗುಡಿಸಲು ಅರಮನೆಯಾಗುವದು ಬೆಳಗಾಗುವದರೊಳಗೆ.

**ನೀಲಾ**— ಹೊಲಸು ನುಡಿಯಾಡಿ ಮನಕೆ ಚೂರಿ ಚುಚ್ಚದಿರು ಸಾಹುಕಾರಾ! ಹೊಲೆಯರಿಗೆ ಮಾನವಿಲ್ಲವೇ? ಜನಕಂಜಿ ನಡೆಯುದಿದ್ದರೂ ಮನಕಂಜಿ ನಡೆಯುವದು ನೀತಿಯಲ್ಲವೇ?

**ಸುರೇಶ**— ನೀಲಾ! ಬುದ್ಧಿ ಹೇಳುವ ಸಾಹಸ ಬೇಡ. ನಿನ್ನ ಸೌಂದರ್ಯದ ಸುಖ ಪಡೆಯಲು ಬಂದಿರುವೆ ನಾ. ನಿನ್ನ ಸ್ಪರ್ಶದಿಂದ ಸ್ವರ್ಗ ಸುಖ. (ಕೈ ಹಿಡಿಯಲು ಹೋಗುವನು)

**ನೀಲಾ**— **ಪದ**

ರಾಗ:- ಪಹಡಿ ತಾಳ:- ಕವಾಲಿ

ಮೋಹಿಸದಿರು ಈ ದೇಹವಾ। ಮತಿಮರೆತು ಮಬ್ಬಿನಲಿ ನೀ ||ಪ||
ಒಳಗಿಹುದು ಮಲಮೂತ್ರವಾ। ರಕ್ತ-ಮಾಂಸಮಯ
ಚೀಲವಾ ||ಅ. ಪ||

ಬಿಡು ನೀ ಮಿಥ್ಯಮೋಹವಾ। ಹಿಡಿ ನೀ ಸತ್ಯಮಾರ್ಗವಾ||
ದುರ್ವಿಷಯ ತಳೆಬೇಗಾ। ಬಯಸದಿರು ಕಾಯದ ಮಾಯಾ ||೧||

ಹೆಜ್ಜೆ ಕೀಳದಿರು ಸಾವುಕಾರಾ! ಹುಟ್ಟಾ ಸ್ಪರ್ಶವನರಿಯದ ಅಸ್ಪೃಶ್ಯಳು ನಾ! ನಿನ್ನ ತಲೆಗೆ ತಗಲಿದ ನನ್ನ ದೇಹ ಎಲುವಿನ ತಡಿಕೆ, ಮಲಮೂತ್ರಗಳ ಕುಡಿಕೆ, ರಕ್ತದ ಢಡಿಕೆ, ಮಾಂಸದ ಹಿಡಿಕೆ, ದುರ್ವಾಸನೆಯ ಪುಡಿಕೆ, ಹುಳತ ದೇಹದ ಗೂಡು, ಪಂಚಭೂತದ ನಾಡು, ಹಲವು ವ್ಯಾಧಿಗಳ ಬೀಡು ಈ ಮಾಯೆಯ ಹುಚ್ಚು ಬೇಡ ಸರಿ ಹಿಂದಕ್ಕೆ.

**ಸುರೇಶ**— ಎಲೆ ಹೆಣ್ಣೆ! ಮಾಯೆಯ ಮೋಹಕ್ಕಾಗಿ ಮುನಿಗಳು ಮರುಳಾದರು. ಮಾನವರು ಮನೆ-ಮಾರು ತೊರೆದು ನಿಂತಿಹರು. ರಾಜ

ಮಹಾರಾಜರು ರಾಜತ್ಯಾಗ ಮಾಡಿಹರು ಹರಿಹರಾದಿಗಳನು ಈ ಮಾಯೆ ಬಿಟ್ಟಿಲ್ಲ. ಈ ಮಾಯೆಯ ಮಾತು ಬೇಡ. ನಿನ್ನ ಮುದ್ದಾದ ಮುಖ ನೋಡಿ ಹಿಂದಕ್ಕೆ ಹೆಜ್ಜೆ ಇಡದಾಗಿದೆ. ನಿನ್ನ ಮನ ನೋಯಿಸಿ ಆಲಿಂಗನವನ್ನು ಅಪೇಕ್ಷಿಸುವ ಇಚ್ಛೆ ನನಗಿಲ್ಲ. ನಿನ್ನಿಚ್ಛೆಯಂತೆ ಸಾಗಿಬಾ ನೀಲಾ.

**ನೀಲಾ**— ಕಾಮವಾಸನೆಯ ಕುಚೇಷ್ಟೆ ಬೇಡೆನ್ನ ಮುಂದೆ. ಆಲಿಂಗನದ ಮಾತೆತ್ತಿ ನನ್ನ ಹೃದಯ ನೋಯಿಸದಿರು. ನಿನ್ನ ಬಾಯ್ಬುಗ್ಗಿ ದುರೆಗೆ ಬೆದರುವ ಹಗುರೆದೆಯ ಹುಡುಗಿ ನಾನಲ್ಲ. ನನ್ನ ಹೃದಯದ ಇಚ್ಛೆ ಬಿಚ್ಚಿ ಹೇಳುವೆ. ನಾನಿನ್ನ ಮಗಳು ನಿನ್ನ ಒಳಗಣ್ಣಿಗೆ ಹೊಳೆಯಲಿ, ತಿಳಿಗಣ್ಣಿಗೆ ತಿಳಿಯಲಿ.

[ ಮುಂದಕ್ಕೆ ಸಾಗಲು ]

**ಸುರೇಶ**— (ತಡೆದು) ಸವಿನುಡಿಯಾಡಿ ಕಡೆಗಾಗದಿರು ಕುಮಾರಿ ನಿನ್ನ ಸೌಂದರ್ಯದ ಸವಿಯ ಸುಖಕ್ಕಾಗಿ ಸಂಶಯವಿಲ್ಲ. ನೀಲಾ ನೋಡಿಲ್ಲಿ ಸತ್ತನಾ ಸೂರ್ಯನು ನೆತ್ತರ ಕಾರಿ. ಬೆಳಕು ಬತ್ತಿತು. ಕತ್ತಲೆ ಸುಳಿದಾಡುತಿದೆ ಬೇಗ ಬಿಗಿದಪ್ಪು ನಿನ್ನನ್ನು ಎಂದು. ನಿನ್ನ ಸೌಂದರ್ಯದ ಸವಿಫಲವನ್ನು ಸವಿದಾಗಲೇ ಮನತೃಪ್ತಿ. (ಮುಟ್ಟಲು ಮುಂದಕ್ಕೆ ಹೋಗುವನು)

**ಇಂದುಧರ**— (ಪ್ರವೇಶ) ಅಂದೇ ನಿನ್ನ ಜೀವನದ ಸಮಾಪ್ತಿ. ದುಡುಕದಿರು ದುಡುಕಿದರೆ ನೆತ್ತರ ಹರಿಯುವದು. ನಿನ್ನ ಕಾಮುಕ ಕಾಯದಿಂದ. ಸಿರಿಯ ಸೊಕ್ಕಿನಿಂದ ಮೆರೆಯದಿರು. ಬೇಗ ಸರಿದು ನಿಲ್ಲು.

**ಸುರೇಶ**— ನೀನಾರು?

**ಇಂದುಧರ**— ಮಾನವತಿಯರ ಮಾನವನ್ನು ಹರಣ ಮಾಡುವ ದಾನವರನ್ನು ದಮನ ಮಾಡಲು ಹೊರಟ ನಾನೊಬ್ಬ ಮಾನವ. ಧನದ ಮದದಿಂದ ಮನಬಂದಂತೆ ನಡೆಯುವವರನ್ನು ದಂಡಿಸಲು ಹೊರಟ ನಾನೊಬ್ಬ ಮಾನವ. ಮಾನವರೂಪಿ ದಾನವರಿಗೆ ಮಾನವರಂತೆ ಕಾಣುವ ನಾನೊಬ್ಬ ಮಾನವ.

**ಸುರೇಶ**— ಗದ್ದರಿಸದಿರು ಇಂದುಧರಾ! ಭವಿಷ್ಯತ್ಕಾಲದ ಗರ್ಭದಲ್ಲಿ ಹೂತು ಹೋಗುವಿ. ನನ್ನ ಮನ ನೊಯ್ದರಿ. (ನಗುತ್ತ ಹೋಗುವನು)

**ನೀಲಾ**— ನನ್ನೊಡೆಯಾ ನಿನ್ನ ಮನವೆಷ್ಟು ಸರಳ ಈ ಹೊಲೆಯರಮೇಲೆ ನಿನ್ನದೆಷ್ಟು ಪ್ರೇಮ.

**ಇಂದುಧರ**— ಪ್ರೇಮ! ಆರ್ಯ ಕುಮಾರಿಯರ ಶೀಲವನ್ನು ಕಾಪಾಡುವ ಮಾನವರ ಕರ್ತವ್ಯದಲ್ಲಿ ಅಡಕವಾದ ಪ್ರೇಮ ನನ್ನನ್ನು ಕರೆದು ತಂದಿತಿಲ್ಲಿಗೆ ನೀಲಾ! ಈ ಪ್ರೇಮಕ್ಕೆ ಕಲ್ಪನೆಯ ಕೊನರು ಕುಸುರುಗಳಿಲ್ಲ. ಇನ್ನಾವದರ ಸ್ವಾರ್ಥವಿಲ್ಲ. ಮೋಹದ ಮಂಜಿಲ್ಲ. ಮತ್ತಾವದರ ಆಶೆಯಿಲ್ಲ. ಇದಕಿನಿತು ಹೊಗಳಿಕೆ ಬೇಡ ನಡೆ ಹೋಗು ನೀಲಾ.



# ೪ ನೇ ಪ್ರವೇಶ

[ ಸ್ಥಳ— ದೇವದಾಸರ ಮನೆ )

ರಸ್ತಾದ ಮೇಲೆ

**ಶಿಲಾಕಾಂತ**— ಥೂ! ಥೂ!! ಧರ್ಮದ ಬಗ್ಗೆ ಸಮಾಜದ ಶ್ರದ್ಧೆ ಕಡಿಮೆಯಾಗಿದೆ. ಜಾತಿಯ ಬಗ್ಗೆ ಜನತೆ ತಾಳಗೆಟ್ಟು ನಡಿಯಹತ್ತಿದೆ. ಈ ನವಯುಗದ ನವನವೀನ ದೃಷ್ಟಿಯ ಜಳದಿಂದ ಜಾತಿ ಮತಪಂಥಗಳು ಹುರುಪಳಿಸಹತ್ತಿವೆ. ಈ ವ್ಯಕ್ತಿಸ್ವಾತಂತ್ರ್ಯದ ಯುಗದಲ್ಲಿ ಗುರುಹಿರಿಯರಿಗೆ ಮಾನವೇ ಇಲ್ಲ. ವರವನ್ನು ಹುಡುಕುವದರಲ್ಲಿ ಹಿರಿಯರಿಗೆ ಹಕ್ಕಿಲ್ಲ. ಇದ್ದೊಬ್ಬ ಮಗಳ ವಿವಾಹದ ವಿಷಯ ತಲೆಬೇಸರಿಕೆಯಾಗಿದೆ. ಇಂದು ಹೆಣ್ಣು ಹಡೆದವರ ಬಾಳ್ವೆ ಹೀಗಾಗಿದೆ. ವರ ಸಿಗದ್ದಕ್ಕೆ ಕುಮಾರಿಯರಾಗಿ ಕೆಲವು ಕಾಲ ಕಳೆದ ಮೇಲೆ ಜಾತಿ ನೀತಿಯ ಬಿಟ್ಟು ಪ್ರೇಮ ವಿವಾಹಕ್ಕೆ ಮನಸೋತು ಮನೆತನಕ್ಕೆ ಕಪ್ಪು ಬಳಿದ ಉದಾಹರಣೆಗಳು ಹೇರಳವಾಗಿವೆ ಅದಕ್ಕಾಗಿ ಭಯಬಂದಿದೆ. ದೇವದಾಸರ ಮಗ ಇಂದುಧರ ಕಲಿತವ. ಕುಲದಲ್ಲಿ ಶ್ರೇಷ್ಠ. ಕಾಡಿಯಾದರೂ ಹುಡುಗಿಯನ್ನು ಇಂದುಧರನಿಗೆ ಕೊಡಬೇಕೆಂದು ಹೊರಟಿರುವೆ. [ಹೋಗುವನು)

(ದೇವದಾಸರ ಮನೆ)

**ದಯಾವತಿ**— ಏನು ನಮ್ಮ ಇಂದುಧರನು ವಯಸ್ಸಿಗೆ ಬಂದಿದ್ದಾನೆ ಕಾಲೇಜದ ಅಭ್ಯಾಸ ಮುಗಿಯುತ್ತ ಬಂತು. ವಿವಾಹದ ವಿಚಾರವೇ ಇಲ್ಲದಾಯಿತು.

**ದೇವದಾಸ**— ದಯಾ! ಕ್ರೀಯಾ ಶೀಲಗಳಲ್ಲಿ ಶ್ರೇಷ್ಠರು ನಾವು. ಎಷ್ಟೋ ಆಚಾರವಂತರು ತಮ್ಮ ಕುವರಿಯರನ್ನು ಕೊಡುವ ವಿಚಾರದಲ್ಲಿ ಬಂದರೆ ಒಂದಿಲ್ಲೊಂದು ತೊಡಕು ಬರಲಿಕ್ಕೆ ಹತ್ತಿವೆ. ಮೇಲಾಗಿ ಇಂದುಧರನ ಹೊಸ ವಿಚಾರದ ಬಗೆಗೆ ಸಂಶಯ ಬಂದಿದೆ.

**ದಯಾವತಿ**— ಇಂದುಧರ ಸುಶಿಕ್ಷಿತ. ತವ್ಮಾಜ್ಞೆಯಂತೆ ನಡೆಯುವವ ಹೀಗಿದ್ದು ಅವನ ಮೇಲೆ ಅದಾವ ಸಂಶಯ?

**ದೇವದಾಸ**— ಮನೆಯಂಗಳ ಬಿಟ್ಟು ಹೊರಗಿನ ಜಗತ್ತನ್ನು ಕಾಣದ ನಿನಗೆ ಇಂದಿನ ತರುಣರ ವಿಷಯ ತಿಳಿಯುವದು ಸಾಧ್ಯವಿಲ್ಲ. ಇಂದುಧರನಿಗೆ ಧರ್ಮದ ಮೇಲೆ ನಂಬುಗೆ ಇಲ್ಲ. ಕೀಳು ಜಾತಿಯಲಿ ಬೆರೆತು ಕುಲದ ಕೀರ್ತಿಯ ಮರೆತು ನವಯುಗದ ಮೃಗಜಲದ ಬೆನ್ನುಹತ್ತಿ ಧಾವಿಸುತ್ತಿರುವದನ್ನು ನೋಡಿದರೆ ಮನೆಯ ಗೌರವಕ್ಕೆ ಕುಂದು ಬರುವದೆಂಬ ಭಯ.

**ದಯಾವತಿ**— ನಿಮ್ಮದು ಸಂಶಯ ಸ್ವಭಾವ. ಉಚ್ಚ ಶಿಕ್ಷಣ ಪಡೆದ ಇಂದುಧರನ ಬಗ್ಗೆ ವ್ಯರ್ಥ ಸಂಕೋಚಪಡುವದು ಸರಿಯಲ್ಲ.

**ದೇವದಾಸ**— ವ್ಯರ್ಥ ಸಂಕೋಚವಲ್ಲ ದಯಾ! ಇಂದಿನ ತರುಣತರುಣಿಯರು ಅದ್ವೈತ ಸಿದ್ಧಾಂತದ ಬೆನ್ನು ಹತ್ತಿ ವಿಧವಾ ವಿವಾಹ ವಿಜಾತಿವಿವಾಹ ಅಸ್ಪೃಶ್ಯತಾ ನಿವಾರಣೆ ಮುಂತಾದ ಕಾರ್ಯದಲ್ಲಿ ಅಡಿಇಟ್ಟು ಬಹುದಿನಗಳಿಂದ ಮರ್ಯಾದೆಯಲ್ಲಿ ತಲೆಯೆತ್ತಿ ಮೆರೆಯುತ್ತ ಬಂದ ಮನೆತನಕ್ಕೆ ಕಲಂಕದ ಕಿಡಿ ಇಡಹತ್ತಿದ್ದಾರೆ. ಈ ವಿಷಮ ಪರಿಸ್ಥಿತಿಯ ಪ್ರವಾಹದಲಿ ಶಿಲುಕಿ ಜಾತಿಬಾಹಿರನಾಗುವನೆಂಬ ಭಯ ನನ್ನ ಹೃದಯ ಆವರಿಸುತಿದೆ. ಸಂಶಯದ ಬಿರುಗಾಳಿ ಕರ್ಣರಂಧ್ರಗಳಲಿ ನುಸುಳಿ ಹೃದಯವಕಾಶಿ ಉಚ್ಚರಿಸಹತ್ತಿದೆ. ನಿರಾಶಯ ಉದ್ಗಾರ!

**ದಯಾವತಿ**— ಇಂದುಧರನು ಶೀಲಸಂಪನ್ನನು ಆತನಿಗೆ ಯಾವ ವಿಷಮ ಪರಿಸ್ಥಿತಿಯ ಗಾಳಿ ಸೋಂಕಲು ಸಾಧ್ಯವಿಲ್ಲ. ಭಯ ಮರೆತು ಅವನ ವಿವಾಹದ ವಿಚಾರ ಮಾಡಿರಿ.

[ಹೋಗುವಳು]

[ಶಿಲಾಕಾಂತರ ಪ್ರವೇಶ]

**ದೇವದಾಸ**— ಬರಬೇಕು ಶಿಲಾಕಾಂತ ಪಂಡಿತರೇ.

**ಶಿಲಾಕಾಂತ**— ಇಂದುಧರನ ಶಿಕ್ಷಣ ಎಲ್ಲಿಯವರೆಗೆ ಸಾಗಿದೆ.

**ದೇವದಾಸ**— ಬಿ. ಎ. ದಲ್ಲಿ ಅಭ್ಯಾಸ ಮಾಡುತ್ತಿದ್ದಾನೆ. ಮತ್ತೇನು ವಿಶೇಷ.

**ಶೀಲಾಕಾಂತ**— ವಿಶೇಷ ವಿಷಯವೇನೂ ಇಲ್ಲ. ಆದರೆ ಇಂದುಧರನ ಲಗ್ನದ ವಿಚಾರ ಮಾಡಿರುವಿರೋ ಇಲ್ಲೋ?

**ದೇವದಾಸ**— ಅದೇ ವಿಚಾರದಲ್ಲಿದ್ದೇನೆ. ಕುಲಗೋತ್ರಗಳಲ್ಲಿ ಮೇಲಾದ ಶೀಲಸ್ವಭಾವ ಸಂಪನ್ನ ಕನ್ಯೆ ಸಿಗದ್ದಕ್ಕೆ ಚಿಂತೆ.

**ಶೀಲಾಕಾಂತ**— ಚಿಂತೆ ಮಾಡಬೇಡಿರಿ. ನನ್ನ ತಮ್ಮನ ಮಗಳು ಲೀಲಾ! ಸುಶಿಕ್ಷಿತಳು, ಶೀಲಸಂಪನ್ನಳು .ಅವಳು ತಮ್ಮ ಮನೆಯ ಸೊಸೆಯಾದರೆ ಭಾಗ್ಯಲಕ್ಷ್ಮಿ ಬಂದಂತೆ. (ಇಂದುಧರ ಜೀವನರ ಪ್ರವೇಶ) ಇಂದುಧರ ಇವನಾರು?

**ಇಂದುಧರ**— ನನ್ನ ಗೆಳೆಯ ಜೀವನನು.

**ಶೀಲಾಕಾಂತ**— ಥೂ! ಥೂ!! ಇಲ್ಲೀನು ಇದೇನೆ. ಏನು ಹೊಲೆಯರ ಹುಡುಗನ ಕೂಡ ಗೆಳೆತನ.

**ಇಂದುಧರ**— ಗೆಳೆತನಕ್ಕಿಲ್ಲ. ಜಾತಿ-ಮತಗಳ ತೊಡಕು. ಗೆಳೆತನ ಮಾನವನಿಗೆ ದೊರೆತ ಒಂದು ಅಮೌಲ್ಯವಾದ ವರ. ಎರಡು ಜೀವಿಗಳನ್ನು ಒಂದಾಗಿರಿಸಿ ಸದಾ ಆನಂದ ನೀಡುವ ಅಕ್ಷಯ ಭಾಂಡಾರವೇ ಗೆಳೆತನ! ಹೃತ್ಕಮಲವ ಅರಳಿಸಿ ಚೈತನ್ಯದುತ್ಸಾಹದಲಿ ಸಾಗಿಸುವ ದಿವ್ಯ ಶಕ್ತಿಯೇ ಗೆಳೆತನ!! ಪಂಡಿತರೇ ನಾನು ನಿಂತಿರುವ ನೆಲದಮೇಲಿರುವವರೆಲ್ಲರೂ ನನ್ನ ಅಣ್ಣ-ತಮ್ಮಂದಿರು. ಅವರಿಗೂ ನನ್ನಂಥ ಆತ್ಮವಿದೆ. ಗೆಳೆತನದ ಒಲುಮೆ ನಲುಮೆಗಳು ಇವೆ. ಬದುಕಿನ ಗೆಲವು-ಒಲವುಗಳಿವೆ. ಒಲುವನ್ನು ಬೆಳೆಸುವದರಲ್ಲಿ, ನಲಿವನ್ನು ಹೆಚ್ಚಿಸುವದರಲ್ಲಿ ನನ್ನ ಸಹಜೀವಿಗಳೆಲ್ಲರೂ ನನ್ನಂಥವರು ಎಂಬುದನ್ನು ಅರಿತಿದ್ದೇನೆ. ಮಾನವನಾದ ನಾನು ಮಾನವರ ಗೆಳೆತನ ಮಾಡಿದರೆ ಇದಕ್ಕೇಕೆ ಇಷ್ಟು ತಿರಸ್ಕಾರ.

**ಶೀಲಾಕಾಂತ**— ಥೂ! ಥೂ!! ಮತ್ತು ಆದೇನೆ. ಹೊಲೆಯನಾದ ಇವನ ಆಚಾರ-ವಿಚಾರ ಬೇರೆ, ಊಟ-ಉಡಿಗೆಗಳು ಬೇರೆ, ಸಂಸ್ಕೃತಿಗಳು

ಬೇರೆ ಅಂತೇ ಇವರಿಗೆ ಹೊಲೆಯರೆಂದು ಕರೆದಿರುವರು. ಹೊಲೆಯರು ಅಸ್ಪೃಶ್ಯರು, ಮುಟ್ಟಲಾರದ ಮಾನವರು, ಇವನ ಸಹವಾಸ ಬೇಡ.

**ಜೀವನ**— ಮನುಷ್ಯರಾದ ನಮ್ಮನ್ನು ಮನುಷ್ಯರು ಮುಟ್ಟಬಾರದೇ? ಗೆಳೆತನ ಮಾಡಬಾರದೆ? ಇದಾವ ಜ್ಞಾನಸಂಪನ್ನರ ಮತ.

**ಇಂದುಧರ**— ಮುಟ್ಟು! ಮುಟ್ಟಲಾರದ ಹೊಲೆಯೊಳಗೆ ಹುಟ್ಟಿಹುದು ಜಗವೆಲ್ಲ. ಮುಟ್ಟು ತಾ ತಡೆದು ಹುಟ್ಟಹುದು ದೇಹ! ಮಾನವರು ಮಾನವರನ್ನು ಮುಟ್ಟಬಾರದೆಂಬುವದು ಮಾನವಧರ್ಮವಲ್ಲ ಪಂಡಿತರೇ.

**ಶಿಲಾಕಾಂತ**— ಆರ್ಯಕಾಲದಿಂದಲೂ ಇವರು ಶೂದ್ರರು. ಇವರನ್ನು ಮುಟ್ಟಿಸಿಕೊಳ್ಳಬಾರದೆಂಬುವದು ಶಾಸ್ತ್ರದ ಆಧಾರ.

**ಜೀವನ**— ಮಾನವರಿಂದ ನಿರ್ಮಿತವಾದ ಶಾಸ್ತ್ರಗಳು ಮಾನವರನ್ನು ಮುಟ್ಟಿಸಿಕೊಳ್ಳಬಾರದೆಂದು ಹೇಳುವವೇ? ಇದಾವ ಸ್ವಾರ್ಥಮಯ ಶಾಸ್ತ್ರದ ಆಧಾರ. ಮುಟ್ಟಬೇಡ ಈ ಪದ್ಧತಿ ಹಿಂದು ಸಮಾಜವನ್ನು ಇಬ್ಭಾಗಿಸಿ ಭಾರತದಲ್ಲಿ ದೊಡ್ಡ ಕೊರಕಲವ ಕೆಡವಿ ಅದರಲ್ಲಿ ಹೆಣಗಳ ರಾಶಿಯನ್ನೊಟ್ಟಿದರೂ ಮತ್ತೆ ಬಾರದು ಕರುಣೆ ಹಿಂದುಧರ್ಮದ ಹಿರಿಯರಿಗೆ.

**ಪದ**

ರಾಗ:- ಬಿಹಾಗ    ತಾಳ:- ಏಕ್ಕಾ

ಜಾತಿಭೇದದ ಹೇಸಿವಿಚಾರದಿ। ಘಾಶಿಯಾಯಿತು ಭಾರತವಾ।
ಮಾನವರ ಮನದಿ ಇನ್ನೂ ಜನಿಸದು ದಲಿತರಮೇಲೆ ದಯಾ ॥ಪ॥
ನಿರ್ಧಯದಿಂದಾ ತುಳಿಯುತಿಹರು। ಕರುಣೆಯಿಲ್ಲವು ಧರ್ಮದ
ಹಿರಿಯರಿಗೆ। ದೀನರವಾಣಿ ಕೇಳಿಸದೆ ದೇವಾ॥ (ಹೋಗುವನು)

**ಇಂದುಧರ**— ಕಪಟಚಾರಿಗಳು ಸ್ವಾರ್ಥಕ್ಕಾಗಿ ಶಾಸ್ತ್ರದ ಆಧಾರಗಳನ್ನು ನಿರ್ಮಿಸಿರುವರು. ಎಲುಬು, ಮಾಂಸ, ಕರುಳು, ನರ ಚರ್ಮದ ಹೊದಿಕೆ, ಹೊಲೆರಕ್ತ ಶುಕ್ಲದಿಂದಾದ ದೇಹಕ್ಕೆ ಕುಲ ಯಾವದು? ಕೂಳಿನಿಂದ ಕುಲ ಬೆಳೆದು, ನೀರಿನಿಂದ ಮಡಿ ಬೆಳೆದು, ಮೇಲು-ಕೀಳಿನ ತಾರತ

ವ್ಯವಾಗಿದೆ. ಸ್ವಾಮಿ ವಿವೇಕಾನಂದರು ವಿಶ್ವವನ್ನೇ ಬಡಿದೆಬ್ಬಿಸಲು ಸಿಡಿಲಿನ ಲೆಕ್ಕಣಿಕೆಯನ್ನು ಹಿಡಿದು, ಮಾನವೀಯತೆಯ ತತ್ವವನ್ನು ಜಗತ್ತಿಗೆ ಸಾರಿ ಹೇಳಿದ್ದಾರೆ. ಮಾನವರಲ್ಲಿ ಸ್ಪೃಶ್ಯ-ಅಸ್ಪೃಶ್ಯವೆಂದು ಭೇದ ಮಾಡಬಾರದು ಸ್ವಾಮಿ.

**ಶಿಲಾಕಾಂತ—** ವೇದಾಗಮಗಳು ಹಿಂದುಧರ್ಮದ ಪವಿತ್ರ ಗ್ರಂಥಗಳು, ಇವುಗಳಲ್ಲಿ ಜಾತಿಗೆ ಮನ್ನಣೆಯಿದೆ. ವೇದಾಗಮಗಳಂತೆ ನಡೆಯುವದೇ ಹಿಂದುಧರ್ಮದ ಉಸಿರು. ಈ ಉಸುರಿನಿಂದ ಬದುಕಿ ಬಂದಿರುವದೇ ಸಮಾಜದ ಹೆಸರು ಸ್ಪೃಶ್ಯ- ಅಸ್ಪೃಶ್ಯತೆಯೆಂದು.

**ಇಂದುಧರ—** ವೇದಾಗಮ ಅಪಾರ್ಥ ಮಾಡಿದ ಸ್ವಾರ್ಥಿಗಳ ಸಿದ್ಧಾಂತ ಜಾತಿಗಳು ಅವೆ ಎಂದು ಹೇಳುವದು. ಹುಟ್ಟಿನಿಂದ ಕುಲ ನಿರ್ಣಯ ಮಾಡಬಾರದೆಂದು ಮಹಾತ್ಮಾ ಬಸವಣ್ಣನವರು ಹೇಳಿಲ್ಲವೇ? ವೇದಾಗಮಗಳನ್ನು ಉಚ್ಚವರ್ಣದವರು ಬರೆದಿರುವರೇ? ವ್ಯಾಸ ಬೋಯಿತಿ ಮಗ. ಸಾಕ್ಷಾತ್ ಅಗಸ್ತ್ಯ ಕಬ್ಬಲಿಗ. ದುರ್ವಾಸ ಮಚ್ಚಿಗ. ಕಶ್ಯಪ ಕಮ್ಮಾರ. ಹೀಗಿದ್ದು ಮಾನವರಲ್ಲಿ ಸ್ಪೃಶ್ಯಾ-ಸ್ಪೃಶ್ಯತೆಯೆಂಬ ಭೇದ ಮಾಡುವವರು ಹಿಂದೂಧರ್ಮ ನುಂಗಿಬಿಡುವ ಘಟಸರ್ಪಗಳು.

**ಶಿಲಾಕಾಂತ—** ದೇವದಾಸರೇ ಇಂದುಧರನ ನುಡಿಯನ್ನು ಕೇಳಿದಿರಾ ಜಾತಿ ಇಲ್ಲವೆಂದು ಹೇಳುವ ಇವರ ಉಪನ್ಯಾಸಕ್ಕೆ ಆತ್ಮವು ಬೇಸತ್ತು ಹೋಗಿದೆ. ಇವನ ವಿಷಯವಾಗಿ ದೀರ್ಘವಾಗಿ ಯೋಚಿಸಬೇಕು. ಇಲ್ಲವೆಂದರೆ ಇಕೋ ನೋಡ್ರಿ ಉಚ್ಛಸಮಾಜದವರಾದ ನಿಮ್ಮ ಕುಲ-ಗೋತ್ರ ಹೊಲೆಯರ ಮನಿ ಸೇರ್‍ಯಾವು?

**ದೇವದಾಸ—** ಇಂದುಧರ ವೇದದ ಅಮರ ನಂದಾದೀಪದ ಜ್ಯೋತಿ ಜಗವ ಬೆಳಗುತಿಹುದು. ಧರ್ಮದ ವಿಷಯದಲ್ಲಿ ಹೊಲೆಯರು ಮಾದಿಗರು ಅಸ್ಪೃಶ್ಯರು ಧರ್ಮದ ಮರ್ಯಾದೆ ಮೀರಿ ಮಾತಾಡದಿರು. ಪಂಡಿತರ ಮಾತಿಗೆ ಪ್ರತಿಯುತ್ತರ ಕೊಡದಿರು.

**ಇಂದುಧರ—** **ಪದ**

ರಾಗ:- ಶಂಕರಾ ತಾಳ:- ತ್ರಿವಿಟಿ

ಹಿರಿಯರೇ ಶಾಂತಭಾವದೀ। ಮಾಡಿರಿ ವಿಹಿತ ವಿಚಾರಾ॥
ಈ ಧರ್ಮದ ವಿಷಯ ॥ಪ॥
ಪಾವನರು ನೀವೆಲ್ಲರೂ ಧೈನ್ಯವನು ತೋರಿರಿ। ದೀನದಲಿತರಲಿ॥೧॥

ತಾತಾ! ಮಾನವರಲ್ಲಿ ಸ್ಪೃಶ್ಯ ಅಸ್ಪೃಶ್ಯರೆಂಬ ಭೇದ ಭಾವನೆಯು ಪಾಪದ ಶಾಖೆಯು. ಚಾತುರ್ವರ್ಣವು ಕರ್ತವ್ಯವನ್ನು ಅವಲಂಬಿಸಿದೆ ಯಲ್ಲದೆ ಕುಲವಲ್ಲ. ಧರ್ಮವು ಅಧಿಕಾರದ ಹಕ್ಕು ಕಲ್ಪಿಸಿಲ್ಲ. ಋಣದ ಕಲ್ಪನೆ ಕೊಟ್ಟಿದೆ. ತಮ್ಮ ತಮ್ಮ ಪಾಲಿನ ಕರ್ತವ್ಯ ಎಲ್ಲರೂ ಮಾಡುವಾಗ ಮೇಲುಯಾರು? ಕೀಳುಯಾರು?

**ದೇವದಾಸ—** ಇಂದುಧರ! ಆರ್ಯಪದ್ಧತಿಯ ಹಿಂದೂ ದರ್ಮವು ಪ್ರತಿಯೊಬ್ಬ ಭಾರತೀಯನ ಹೃದಯದಲ್ಲಿ ಮನೆಮಾಡಿಕೊಂಡಿದೆ. ಧರ್ಮದ ಮೇಲೆ ಪರಕೀಯರ ದಾಳಿ ನಡೆದರೂ ಜಾತಿ-ರೀತಿಗಳು ಅಚ್ಚಳಿಯದೆ ಉಳಿದಿವೆ. ಶಾಸ್ತ್ರಗಳ ನಿಷೇಧಿಸಿ ಮಾತಾಡಿದರೆ ಧರ್ಮದ್ರೋಹ, ಸಮಾಜ ದ್ರೋಹ, ದೈವದ್ರೋಹಕ್ಕೆ ಗುರಿಯಾಗಬೇಕಾಗುತ್ತದೆ. ಇನ್ನು ಮಾತು ಬೇಡ ನಡೆ. (ಇಂದುಧರನು ಹೋಗುವನು)

**ಶಿಲಾಕಾಂತ—** ಥೂ! ಥೂ!! ಇಲ್ಲೀನು ಇದೇನೆ. ದೇವದಾಸರೇ ಆಚಾರವಂತರಾದ ತಮ್ಮ ಮನೆಯಲ್ಲಿ ಅನಾಚಾರದ ಆರಾಧನೆ. ಮಹಧೀ ಶ್ವರಾ ಸಂಕಟ ದೂರಮಾಡೋ.



## ೫ ನೇ ಪ್ರವೇಶ

(ಸ್ಥಳ:– ಜೀವನನ ಗುಡಿಸಲು)

**ಇಂದ್ರಾ**— **ಪದ**

ರಾಗ:– ಕಾಫಿ

ಮನುಜೀವನೇಶಾ! ಮನವೇ ಈತನೆ ಕಾಮಿತದಾಯಕ
ಕ್ರಮದಿ ಪಡೆಯುವೆ ಪ್ರೇಮಾಬ್ಧಿ ಸುರಸುಂದರ ಮೂರುತಿಯಾ ||೧||

**ಜೀವನ**— ತಂಗಿ! ನೀನಾರು ಇಲ್ಲಿಗೆಬಂದ ಕಾರಣವೇನಮ್ಮಾ?

**ಇಂದ್ರಾ**— ತಂಗಿ! ಯಾರಿಗೆ ಯಾರು ತಂಗಿ!! ಹೇಳಲಾರೆ ನೊಂದ ಮನಕೆ ಕುಂದನ್ನು ತಂದುಕೊಳ್ಳದಲೆ ಬಂದಿರುವೆ.

**ಜೀವನ**— ಕುಂದು! ನೊಂದಮನ!! ತಂಗಿ ಭಯಪಡದೆ ಬೇಗ ಹೇಳಮ್ಮಾ. ಈ ಬಂಧುವಿನಿಂದಾಗುವ ಕಾರ್ಯ.

**ಇಂದ್ರಾ**— ಭಯವನು ತೊರೆದು ಅನಾಥಳಾಗಿ ಆಶ್ರಯ ಹೊಂದಲು ಬಂದಿರುವೆ.

**ಜೀವನ**— (ಸ್ವ) ಆಶ್ರಯ! ಇದು ಸಾಕಾರವೋ? ವಿಕಾರವೋ?

**ಇಂದ್ರಾ**— (ಸ್ವ) ವಿಕಾರವಾಗಿ ಕಂಡದ್ದೇನು ವೈಚಿತ್ರ್ಯ.

**ಜೀವನ**— ಈ ಅನಾಥನಿಂದ ಆದಾವ ಆಶ್ರಯದ ಅಪೇಕ್ಷೆ?

**ಇಂದ್ರಾ**— ತಂದೆ-ತಾಯಿಗಳಿಲ್ಲ. ಇದ್ದೊಬ್ಬ ಬಂಧುವೆನಗಿಲ್ಲ. ಅಬಲೆಯಾಗಿ ಹುಟ್ಟಿ ಆಯುಷ್ಯದಲ್ಲಿ ಏನನ್ನು ಕಾಣಲಿಲ್ಲ. ಆದರವನ್ನು ಅಳುಕಿಸಿ ಅನಾಥಳಾದ ನಾನು ಮತ್ತಾವ ಆಶ್ರಯವನ್ನು ಅಪೇಕ್ಷಿಸಲಿ.

**ಜೀವನ**— ಅರ್ಥವಾಗದವಿನಹ ನಿಚಾರವೆಂತು.

**ಇಂದ್ರಾ—** (ಸ್ವ) ದೇವಿ! ಆದಿಮಾಯೆ ನಿನ್ನ ಶಕ್ತಿ ಅಣು ಅಣುಗಳಲ್ಲಿ ತುಂಬಿ ತುಳುಕುತಿಹುದು. ಮುಂಜಾವಿನಲ್ಲಿ, ಸಂಜೆಯಲ್ಲಿ, ಮೊದಲನೆಯ ಜಾವದಲ್ಲಿ ಭಕ್ತಿ ಭಾವನೆಗಳಿಂದ ಆರಾಧಿಸುವ ಈ ದೀನ ಪುತ್ರಿಯ ಇಚ್ಛಿತಾರ್ಥವನ್ನು ಈಡೇರಿಸು. ದೇವಿ! ಮುಚ್ಚಿಡಲಾರೆ ಹೃದಯ ಹಂಬಲವ ಬಿಚ್ಚಿಡುವೆ ಮೆಚ್ಚಿ ಮಾನವ ಕಾಪಾಡು. (ಪ್ರ) ಎಸಳನ್ನರಿಯದ ಹಸುಳೆ ಮೊಸಳೆಯ ಪಾಲಾದರೆ ಶಿಶುವಿನ ನಿಂದೆಗೂ ವಶವಾದೆನೆಂಬ ಭಯದಿಂದ ಜ್ಞಾನಕ್ಕೆಹೊಂದಿ, ಮಾನಕ್ಕೆ ಅಂಜಿ, ಆಶ್ರಯಹೊಂದಲು ಬಂದಿರುವೆ.

**ಜೀವನ—** ಜ್ಞಾನಕ್ಕೆಹೊಂದಿದ ನಿನಗೆ ಆಶ್ರಯ ಕೊಡಬಲ್ಲ ಮಾನವನು ಎಲ್ಲಿಹನು?

**ಇಂದ್ರಾ—** ಎಲ್ಲಿಹನು! ನಾನಿದ್ದಲ್ಲಿಹನು, ನನ್ನಲ್ಲಿಹನು, ನನ್ನೊಡನೆ ಮಾತಾಡುತಿಹನು.

**ಜೀವನ—** ಮಾತಾಡುತಿಹನು ಯಾರು?

**ಇಂದ್ರಾ—** ಜೀವನವನ್ನು ಜೋಡುಮಾಡಲು ಬಂದ ಜೀವನನ ಹೊರತು ಮತ್ತಾರು?

**ಜೀವನ—** ಅರ್ಥವಾಗದಿಹಮಾತು ಅನರ್ಥಕ್ಕೆ ಕಾರಣವು. ಮನಸ್ಸಿನ ನಿರ್ಧಾರವ ನಿರುಕಿಸಿ ನೋಡಿದರೂ ನಿಲುಕದು. ನಿರ್ಣಯ ನೀಡಲು ನಿನ್ನ ಮಾತಿನ ಅರ್ಥ.

**ಇಂದ್ರಾ—** (ಸ್ವ) ಹೃದಯವೇ ಹಾರಬೇಡ! ಪ್ರೇಮಕಾವ್ಯದ ಮೊದಲನೆಯ ಪುಟವ ಓದಲು ಹೃದಯವೇ ಹಾರಬೇಡ! ಮನಸ್ಸೆ ಕುಗ್ಗಬೇಡ!! ಸ್ಪಷ್ಟವಾಗಿ ಹೇಳಿಬಿಡುವೆ. (ಪ್ರ) ತಮ್ಮ ಸತ್ಯಸೌಂದರ್ಯ ಕಂಡೆನ್ನ ಹೃದ್ಗುಹ್ಯದ ಕದ ತೆರೆಯಲ್ಪಟ್ಟಿದೆ. ಎನ್ನ ಆತ್ಮದೇವತೆ ಆರತಿ ಮಾಡಲು ನಿಂತಿಹಳು ತಮ್ಮ ಮೂರುತಿಗೆ. ಕೃಪೆದೋರಿ ಮನದಿಚ್ಛೆಯನ್ನು ಪೂರೈಸು.

**ಜೀವನ—** ಪ್ರೇಮದ ಪರಿಚಯವು ಎನಗಿಲ್ಲ. ತರುಣಿಯರ ಮನದಾಶೆ ಪೂರೈಸುವ ಕರುಣಿ ನಾನಲ್ಲ. ಕುಮಾರಿಯರ ಹೃದಯದಿಂದ ಹೊರಸೂಸುವ ಪ್ರೇಮಬಳಿಸಾರ್ವ ಕಾಮಿಪತಂಗ ನಾನಲ್ಲ! ಅಸಹಾಯ ಜೀವಿಯಾದ ನಾನು ಮನದಿಚ್ಛೆಯನು ಅದೆಂತು ಪೂರೈಸಲಿ!

**ಇಂದ್ರಾ—** **ಪದ**

ರಾಗ-ಕರಿಭಾವತಿ ತಾಳ-ದಾದರಾ

ಶಾಂತಿಪೂರಾ। ಜೀವನಸಾರಾ। ಸತ್ಯಧೀರಾ ॥ಪ॥ ತಣಿಸೆನ್ನ ಮನ
ವಿದ್ಯಾವಿಶಾರದಾ। ಧೀರಾ। ಧರ್ಮವಿದುರಾ। ಸದ್ಗುಣಸಾರಾ।
ಸದ್ಧರ್ಮನಿರುತಾ। ಶ್ರುಷ್ಠೆಯಿಂದಲಿ ಬಂದಿರುವೆನಾ। ಸತಿಧರ್ಮವನು
ಬಯಸಿ। ಪರಮ ಪ್ರೇಮ ಮೂರ್ತಿಯೇ ಜೀವನಾ। ಸಾರಾ। ಶೃಂಗಾರಾ।

ನಿನ್ನ ಸಚ್ಚರಿತೆಗೆ ಮೆಚ್ಚಿ ಬಂದಿರುವೆ ತಪ್ತ ಮನವ ತೃಪ್ತಿಬಡಿಸು.

**ಜೀವನ—** (ಸ್ವ) ತಪ್ತಮನ! ತೃಪ್ತಿಪಡಿಸು!! ಎಂಬ ನುಡಿ ಹೃದಯಕ್ಕೆ ಬಡಿದು ನಿರ್ಬಲ ಮನ ಮತ್ತಿಷ್ಟು ನಿರ್ಬಲವಾಗುತಿದೆ. ಈ ಅಬಲೆಯ ನಿರ್ಧಾರದ ನುಡಿಗಳು ಮೂಢನನ್ನಾಗಿ ಮಾಡಿ ಯೋಚನೆಯ ಮಡುವಿನಲಿ ನೂಕುತಿವೆ. ವಿಚಾರ ವಿಶ್ವವು ನನ್ನ ತಲೆಯನ್ನಪ್ಪಳಿಸಿ ಬದುಕುವಿಕೆಯ ಬಲವನ್ನು ಬಡಿದೋಡಿಸುತಿದೆ. ಅಳುಕು ಅಂಜಿಕೆ ದೂಡಿ ಪರಿಕಿಸುವೆ (ಪ್ರ) ತಪ್ತ ಮನವ ತೃಪ್ತಿಪಡಿಸು ಎಂದು ನುಡಿಯುವ ನೀನಾರು?

**ಇಂದ್ರಾ—** ಮಾನವ ಧರ್ಮದಲಿ ಹುಟ್ಟಿ ಬೆಳೆದ ನಾನೊಬ್ಬ ಮಾನವಳು. ಸಾವುಕಾರ ಸುರೇಶನ ತಂಗಿ ಇಂದ್ರಾ!

**ಜೀವನ—** ಇಂದ್ರಾ! ಅರಿಯದ ಜಾತಿಯ ಜೋಡು! ಅಂತ್ಯಜನ ಜೋಡು ಜನ ನಿಂದಿಸಲಾರದೆ? ಪತೀತನ ಜೋಡು ಪರನಿಂದೆ!

**ಇಂದ್ರಾ—** ಪ್ರೇಮಕ್ಕೆಲ್ಲಿದೆ ಪತೀತಪಾವನರ ಭೇದ? ಮನಮೆಚ್ಚಿ ಬಂದಿರುವೆ ಜಾತಿಯ ಹುಚ್ಚನ್ನು ಮರೆತು-

**ಜೀವನ—** ಜಾತಿಭೇದದ ಭಯವತೊರೆದು ಮನಮೆಚ್ಚಿರುವೆಯಾ?

**ಇಂದ್ರಾ—** ಜಾತಿ! ಜಾತಿ!! ಜಾತಿಯ ಜ್ವಾಲೆಯು ಜನದ ನೀತಿಯನು ಹರಣ ಮಾಡಿ ಮಾನವರನ್ನು ಮಂಗಗಳನ್ನಾಗಿ ಮಾಡಿದೆ. ಜಾತಿಯಂಬುದು ಜಗದುದ್ಧಾರಕನಿಂದ ಹುಟ್ಟಿದ ವಸ್ತುವಲ್ಲ. ಕಾಯಕವೇ ಕುಲವಾಗಿ ಮೇಲು ಕೀಳಿನ ಕೊಳೆಯಾಗಿ ಕೋಪ ತಾಪಗಳಿಗೆ ಗುರಿ ಮಾಡಿತು

ಈ ಜಾತಿಯ ಭೂತ. ಈ ಜಾತಿಯ ಭೂತವನು ಸದೆಬಡೆದು ನೀತಿಗೆ ಮರೆ ಹೊಕ್ಕು ಮಮತೆಯಿಂದ ಬಂದಿರುವೆ.

**ಜೀವನ**— ನಂಬಿಸು ಜಗದ ದೃಷ್ಟಿಯಲಿ ಜಾತಿಗಿರುವ ಮನ್ನಣೆ ನೀತಿಗಿರುವದೇ?

**ಇಂದ್ರಾ**— ನೀತಿ! ವಿಶ್ವಕುಟುಂಬದ ನಿರ್ಮಿತಿಗೆ ಸಾಧನವು ನೀತಿ! ಧಾರ್ಮಿಕ ವಿಚಾರದಲಿ ಅದ್ಭುತ ಕ್ರಾಂತಿ ಮಾಡಿ ಮಾನವರಿಗೆ ಮಾನವೀಯತೆಯ ಅರಿವು ಮಾಡಿದ್ದು ನೀತಿ! ಮಾನವ ಕುಲದ ಸುಖಸಂವರ್ಧನೆಗಾಗಿ ಹೋರಾಡುವದು ನೀತಿ! ಇಂದು ಜಗದ ವಿಚಾರ ಶಕ್ತಿಯಲಿ ಜಾತಿಯ ಅದೃಷ್ಟಶಕ್ತಿ ಅಳಿದಿದೆ. ನೀತಿಯ ದೃಷ್ಟಿ ಬೆಳೆದಿದೆ. ನೀತಿಯ ನೆಲೆಯನ್ನರಿತ ನನಗೆ ಕುಲದ ಹೆಮ್ಮೆಯಿಲ್ಲ- ಜಾತಿಯ ಜಂಭವಿಲ್ಲ. ಸೋತುಬಂದ ಜೀವನ ಆತುಕೋ ಜೀವನಾ!

**ಜೀವನ**— ಮಾನವರೆಲ್ಲರು ಒಂದು ಎಂದು ಹೇಳುವದು ಕೇವಲ ಛಾಯೆ. ಜಾತ್ಯಾತೀತ ರಾಷ್ಟ್ರ ನಿರ್ಮಿಸಬೇಕೆನ್ನುವದು ಬರಿಮಾಯೆ. ಈ ಮಾಯೆಯ ಮೃಗಜಲದ ಬೆನ್ನುಹತ್ತಿ ಜೀವನ ಹಾಳುಮಾಡಿಕೊಳ್ಳದಿರು ಇಂದ್ರಾ! ಶಾಂತಳಾಗು ಅವನತಿಯ ಅಗ್ರಹಕ್ಕೆ ಅವಕಾಶ ಕೊಟ್ಟು ಅನಾಹುತ ಕೈಮಾಡಿ ಕರೆಯದಿರು ಆಲೋಚಿಸು.

**ಇಂದ್ರಾ**— ಆಲೋಚಿಸಿಯೇ ಆಶ್ರಯ ಬೇಡಲು ಬಂದಿರುವೆ. ತಬ್ಬಲಿಯಾದ ಈ ಅಬಲೆಗೆ ಆಶ್ರಯದ ಅಭಯವಚನ ಕೊಡು ಇಲ್ಲವೆ ಮಾನರಕ್ಷಣೆಗಾಗಿ ಮಡಿಯಲು ಹೇಳು.

**ಜೀವನ**— (ಸ್ವ) ಅಂತರಂಗವ ಅಳೆದುನೋಡಿದೆ ಆಡಿದ ಮಾತಿಗೆ ಅಲುಗಲಿಲ್ಲ. ತೊಳೆದು ನೋಡಿದೆ ಕಶ್ಮಲದ ಕಣವೂ ಸಹ ಕಾಣಲಿಲ್ಲ. ಏನೆಂದು ಹೇಳಲಿ ಜಾತಿಯ ಜ್ವಾಲೆಯಲ್ಲಿ ಶಿಲುಕಿದ ನನಗೆ ಆದಾವುದು ಹೊಳೆಯದಾಗಿದೆ. ಹೊಸ ಭಾವದಲ್ಲಿ ಬಾಳಿ ಬದುಕುವೆ ಇಲ್ಲವೆ ಬಯಲಾಗುವೆ (ಪ್ರ) ಇಂದ್ರಾ! ನಿನ್ನಿಚ್ಛೆಯಂತೆ ನಡೆವೆ ಇಲ್ಲವೆ ಮಡಿಯುವೆ ಆದರೆ ಪತಿತನ ಮೇಲಿನ ಪ್ರೇಮಾ!

ಇಂದ್ರಾ ಪದ

ರಾಗ:- ಕಂಬಾವತಿ ತಾಳ:- ತ್ರಿವಟ

ಮಾನವ ಪ್ರೇಮಾ। ವಿಶ್ವ ನಿಯಮಾ।
ಪ್ರೇಮವೇ ಧರ್ಮ। ಪ್ರೇಮವೆ ಕರ್ಮ।
ಪುಣ್ಯ ಕರ್ಮದಾ ಕುರುಹು ಪ್ರೇಮಾ।
ಮಾನದ ಧರ್ಮದ ಅರುಹು ಈ ಪ್ರೇಮಾ।
ಜಾತಿ-ಮತಗಳ ಗಣಿಸದು ಪ್ರೇಮಾ।
ನೀತಿಮಾರ್ಗವಿದೇ ಪ್ರೇಮಾ।
ಸತ್ಯದಸಾಧನ ನಿರ್ಮಲ ಪ್ರೇಮಾ।
ಸತ್ಯಸ್ವರೂಪದ ಸಾಧ್ವಿ ಪ್ರೇಮಾ;



## ೭ ನೇ ಪ್ರವೇಶ

(ಸ್ಥಳ:- ಶಿಲಾಕಾಂತರ ಮನೆ)

**ಕಲ್ಲುಬಾಯಿ**— (ಸ್ವ) ನಮ್ಮವರಿಗೆ ಬಡವರಮೇಲಂತೂ ದಯ ಪೇಯಿಲ್ಲ. ಧರ್ಮ ಧರ್ಮಅಂತ ಧರ್ಮದ ಹುಚ್ಚು ಹಿಡಿದದ. ಬಡವರನ್ನು ಪೀಡಿಸುವದೇ ಇವರ ನಿತ್ಯ ನೇಮವಾಗಿದೆ. ಮಾತಿನಲ್ಲಿ ಒಂದಿಷ್ಟು ಹುರಳಿಲ್ಲ. ಮಾನವರಮೇಲಿ ಕರುಣೆಯಿಲ್ಲ. ಪತಿಯಾದ ಇವರನ್ನು ಪೂಜಿಸಬೇಕೋ ಇಲ್ಲವೆ ಪಾತಕಲಿಸಬೇಕೋ ತಿಳಿಯದಾಗಿದೆ. ಬರುವ ಹೊತ್ತಾಯ್ತು ನೀರನ್ನು ತೋಡಿಡುವೆ. (ಒಳಗೆ ಹೋಗುವಳು)

**ಶಿಲಾಕಾಂತ**— (ಪ್ರ) ಕಲ್ಲು! ಏ ಕಲ್ಲು!! ಏನುಮಾಡತಾ ಇದ್ದೀ.

**ಕಲ್ಲುಬಾಯಿ**— ನೀವು ಬರುವ ಹೊತ್ತಾಯ್ತಂತ ತಿಳಿದು ಬಿಸಿ ನೀರು ತೋಡತಾ ಇದ್ದೆ.

**ಶಿಲಾಕಾಂತ**— (ಸಿಟ್ಟನಿಂದ) ಥೂ! ಥೂ!! ನೀರಿಗೆ ಬೆಂಕಿಹಚ್ಚಾ.

**ಕಲ್ಲುಬಾಯಿ**— ಹಾ! ಹಾ!! ಬೆಂಕಿ ಹಚ್ಚಿದಾಗಲೇ ನೀರು ಬೆಚ್ಚಗಾಗುವದು. ಬೆಂಕಿ ಹಚ್ಚದೇ ನೀರು ಕಾಸುವರೆಂದು ತಿಳಿದಿದ್ದಿರೇನು? ಮಂದಿಗೆ ಶಾಸ್ತ್ರ ಹೇಳತೀರಿ ಇದೆಂಥ ನಿಮ್ಮ ಬುದ್ಧಿ.

**ಶಿಲಾಕಾಂತ**— ಥೂ! ಥೂ!! ಮತ್ತು ಅದೇನೆ? ಬೆಂಕಿ ಹಚ್ಚು ಇದರರ್ಥ ಮಾತಿನ ತಿರಸ್ಕಾರ! ಸಿಟ್ಟಿನ ವಿಶೇಷಾರ್ಥ.

**ಕಲ್ಲುಬಾಯಿ**— ಇದಾವ ನಿಮ್ಮ ಪುರುಷಾರ್ಥ. ಅರ್ಥದ ಗುರ್ತು ಇಲ್ಲದ ನನಗ ಈ ಹೊಸ ಆಪಾರ್ಥ ಗೊತ್ತಾಗುವದು ಹೇಗೆ? ಅದಾವ ನಿಮ್ಮ ಸಿಟ್ಟಿನ ಗೂಡಾರ್ಥ.

**ಶಿಲಾಕಾಂತ**— ಇಂದು ದೇವದಾಸರ ಮನಿಗೆ ಹೋಗಿದ್ದೆ.

**ಕಲ್ಲುಬಾಯಿ**— ಹೋದರೇನಾಯಿತು?

**ಶಿಲಾಕಾಂತ**— ಅವರ ಮಗ ಇಂದುಧರ ಮುಖಕ್ಕೆ ಕಪ್ಪು ಬಳಿದ.

**ಕಲ್ಲುಬಾಯಿ**— ಯಾರಮುಖಕ್ಕೆ ತಮ್ಮ ಮುಖಕ್ಕಂತೂ ಕಪ್ಪು ಹತ್ತಿಲ್ಲ. ಹತ್ತಿದ್ದು ನನಗೆ ಕಾಣುವದೇ ಇಲ್ಲ.

**ಶಿಲಾಕಾಂತ**— ಥೂ! ಥೂ!! ಮತ್ತು ಅದೇನೆ? ತಮ್ಮ ಉಚ್ಚ ಕುಲದ ಕೀರ್ತಿಗೆ ಅಪಕೀರ್ತಿಯ ಕಪ್ಪು ಬಳೆದಾ.

**ಕಲ್ಲುಬಾಯಿ**— ಮೊದಲೇ ವಿಶೇಷಾರ್ಥ ಗೊತ್ತಿಲ್ಲಂತಾ ಹೇಳಿಲ್ಲವೇ ನಿಮ್ಮ ಮಾತಿನ ಅರ್ಥವೇ ಆಗಲಾರದಾಗಿದೆ.

**ಶಿಲಾಕಾಂತ**— ಕಲ್ಲು! ಹೊಲೆಯರ ಹುಡುಗ ಜೀವನನಕೂಡ ಗೆಳೆತನ ಮಾಡಿದ್ದಾನೆ ಆ ಇಂದುಧರ. ದೇವದಾಸರು ನಾವು ಕೂಡಿ ಕೂತಾಗ ಜೀವನನೊಡನೆ ಬಂದೇಬಿಟ್ಟ ಇಂದುಧರ.

**ಕಲ್ಲುಬಾಯಿ**— ಬಂದರೇನಾಯಿತು?

**ಶಿಲಾಕಾಂತ**— ಕುಲಗೋತ್ರಗಳಲ್ಲಿ ಮೇಲಾದ ನಾವು ಹೊಲೆಯರನ್ನು ಮುಟ್ಟಬಾರದೆಂದು ಬುದ್ಧಿ ಹೇಳಿದರೆ ಮಾತಿಗೆ ಮನ್ನಣೆ ಕೊಡದೆ ಹೊಲೆಯರನ್ನು ಮುಟ್ಟಿಸಿಕೊಳ್ಳಬೇಕೆಂದು ದಿಟ್ಟತನದಿಂದ ವಾದಿಸಿದಾ.

**ಕಲ್ಲುಬಾಯಿ**— ಸರಿ ಸರಿ ಮತ್ತೆ.

**ಶಿಲಾಕಾಂತ**— ಸರಿ ಸರಿ ಅನ್ನುವಿಯಲ್ಲೇ ಇನ್ನೆಲ್ಲಿ ಸರಿಯಲಿ ಹಿಂದೆ ಗೋಡೆಯಿದೆ. ನಿನ್ನ ಮಡ್ಡ ತಲೆಗೆ ಹೊಳೆಯುವದಿಲ್ಲವೇ.

**ಕಲ್ಲುಬಾಯಿ**— ಜಾತಿಯಭೂತ ಮೈತುಂಬಿ ಬಾಯಿಗೆಬಂದಂತೆ ಬಡಬಡಿಸಲುಹತ್ತಿದ ನಿಮ್ಮ ತಲೆಯ ಮೆದುಳಿನಿಂದ ಮಾನವರಲ್ಲಿ ಮೇಲು-ಕೀಳು ಇಲ್ಲಾ ಅನ್ನುದು ಸರಿಯಲಿ ಅಂದೆ.

**ಶಿಲಾಕಾಂತ**— ಕಲ್ಲು! ನೀನಾಡುವ ಮಾತಿನಿಂದ ತುಂಬಾ ಅಸಂತೋಷವಾಗುತ್ತದೆ. ಮಾನವರಲ್ಲಿ ಮೇಲು-ಕೀಳು ಇಲ್ಲಾ ಎನ್ನುವ ಮಾತಿನಿಂದ ತುಂಬಾ ಖೇದವಾಗುತ್ತದೆ. ಮಾತು ಮಾತಿಗೆ ಪತಿಗೆ ಪ್ರತ್ಯುತ್ತರ ಕೊಡುವದು ಸತಿಧರ್ಮವಲ್ಲ.

**ಕಲ್ಲುಬಾಯಿ—** ಮತದ ನೆವದಿಂದ ನೀವು ಮಾನವರನ್ನು ಪೀಡಿಸುವದನ್ನು ನೋಡಿದರೆ ತುಂಬಾ ದುಃಖವಾಗುತ್ತದೆ. ಜಾತಿಯ ಹುಚ್ಚು ಹಿಡಿದು ಮಾನವರಲ್ಲಿ ಮೇಲು-ಕೀಳು ಎಂದು ಮಾತಾಡುವ ಪತಿಗೆ ಪ್ರತಿಯುತ್ತರಕೊಟ್ಟು, ಕುಲ ಒಂದಲ್ಲದೆ ನೂರೆಂಟು ಕುಲಗಳಿಲ್ಲ ಎಂದು ತಿಳಿಸಿ ಹೇಳುವದೇ ಸತಿಧರ್ಮ! ಈ ಧರ್ಮದ ತತ್ವದತ್ತ ಸಾಗಿ ನಿಮಗೆ ಮಾನವ ಧರ್ಮದ ಅರಿವು ಮಾಡಲು ಪ್ರತ್ಯುತ್ತರ ಕೊಟ್ಟಿರುವೆನು ಇಷ್ಟೆ.

**ಶಿಲಾಕಾಂತ—** ಕಲ್ಲು! ಧರ್ಮದ ವಿರುದ್ಧ ಹೋರಾಡುವ ಸಾಹಸ ಮಾಡಬೇಡ ಅದು ನಿನ್ನ ಬುದ್ಧಿಗೆ ನಿಲುಕದು. ಹೊಲೆಯರು ಮಾದಿಗರು ಅಸ್ಪೃಶ್ಯರು ಮಾನವರಲ್ಲಿ ಕನಿಷ್ಟರು.

**ಕಲ್ಲುಬಾಯಿ—** ಇದುವೇ ಮಾನವರ ಅನಿಷ್ಟ! ಇರಲಿ ನನಗಾಗಿ ಮೊನ್ನೆ ಸಾಮಾನು ಮಾಡಿಸಿರುವಿರಲ್ಲಾ ಅವು ಯಾವವು?

**ಶಿಲಾಕಾಂತ—** ಬೋರಮಾಳ ಪದಕದಸರ ತಾಳಿಸರ ಬಿಲ್ವಾವರ.

**ಕಲ್ಲುಬಾಯಿ—** ಅವೆಲ್ಲವುಗಳನ್ನು ಯಾತರಿಂದ ಮಾಡಿಸಿರುವಿರಿ?

**ಶಿಲಾಕಾಂತ—** ಬಂಗಾರದಿಂದ.

**ಕಲ್ಲುಬಾಯಿ—** ಈ ಎಲ್ಲ ಹೆಸರುಗಳು ಬೇರೆಯಾದರೂ ಇವುಗಳಲ್ಲಿರುವದು ಬಂಗಾರ ಒಂದೇ?

**ಶಿಲಾಕಾಂತ—** ನಿಜ.

**ಕಲ್ಲುಬಾಯಿ—** ಇದರಂತೆ ಎಲ್ಲ ಮನುಷ್ಯರ ನಾಮಗಳು ಬೇರೆಯಾಗಿದ್ದರೂ ಅವರೆಲ್ಲರಲ್ಲಿರುವ ಆತ್ಮ ಒಂದೇ. ಗಿಡಕ್ಕೆ ಬೇರೆ ಬೇರೆ ಹರಿ ಕೊಂಬೆಗಳಿದ್ದರೂ ಅವುಗಳಲ್ಲಿರುವ ರಸವು ಒಂದೇ. ಧರ್ಮದ ನಾಮಗಳು ಬೇರೆಯಾಗಿದ್ದರೂ ಅವುಗಳಲ್ಲಿರುವ ತತ್ವ ಒಂದೇ. ಜಗತ್ತಿಗೆ ಸೂರ್ಯನು ಒಬ್ಬನೇ ಹೀಗಿದ್ದು ಮಾನವರಲ್ಲಿ ಸ್ಪೃಶ್ಯ ಅಸ್ಪೃಶ್ಯರೆಂದು ಭಾವಿಸುವದು ಶುದ್ಧ ತಪ್ಪು.

**ಶಿಲಾಕಾಂತ—** ಥೂ! ಥೂ!! ಜಾತಿಗೆ ವಸ್ತುಗಳ ಹೋಲಿಕೆ

ಕೊಟ್ಟು ಹೇಳುವದು ಸರಿಯಲ್ಲ. ದೇವರು ನಿನ್ನನ್ನು ಉಚ್ಚ ಕುಲದಲ್ಲಿ ಹುಟ್ಟಿಸಿದ್ದು ವ್ಯರ್ಥ.

**ಕಲ್ಲುಬಾಯಿ**— ನನ್ನನ್ನು ದೇವರು ಹುಟ್ಟಿಸಿದ್ದಾನೆ. ನಿನ್ನನ್ನು ಹುಟ್ಟಿಸಿದವರು ಯಾರು?

**ಶಿಲಾಕಾಂತ**— ದೇವರು.

**ಕಲ್ಲುಬಾಯಿ**— ಅಸ್ಪೃಶ್ಯರನ್ನು ಹುಟ್ಟಿಸಿದವರು ಯಾರು?

**ಶಿಲಾಕಾಂತ**— ದೇವರು.

**ಕಲ್ಲುಬಾಯಿ**— ಅಂದಮೇಲೆ ಮಾನವರೆಲ್ಲರೂ ದೇವರ ಮಕ್ಕಳು. ಎಲ್ಲರೂ ಅಣ್ಣತಮ್ಮಂದಿರು. ಇವರಲ್ಲಿ ಕೆಲವರು ಮುಟ್ಟಿಸಿಕೊಳ್ಳುವವರು ಕೆಲರು ಮುಟ್ಟಿಸಿಕೊಳ್ಳಲಾರದವರು. ಇದಾವ ನಿಮ್ಮ ವಿಚಾರ ತಿಳಿಯದ ಆಚಾರ. ಘನಸಮಾಜದ ಅನಾಚಾರ.

**ಶಿಲಾಕಾಂತ**— ಧರ್ಮ ನಿನ್ನೆ ಮೊನ್ನಿನದಲ್ಲ ಕಲ್ಲು! ಪುರಾತನ ಕಾಲದಿಂದಲೂ ನಡೆದುಬಂದುದು. ಹಿಂದಿನ ಜನ್ಮದ ಪುಣ್ಯದ ಬಲದಿಂದ ಹುಟ್ಟಿದವರು ಸ್ಪೃಶ್ಯರು. ಪಾಪಕರ್ಮದಿಂದ ಹುಟ್ಟಿದವರು ಅಸ್ಪೃಶ್ಯರು ಎಂಬುದು ಶಾಸ್ತ್ರದ ಸಿದ್ಧಾಂತ. ಧರ್ಮಗ್ರಂಥ ಸ್ತ್ರೀಯರಾದ ನಿಮಗೆ ತಿಳಿಯದು.

**ಕಲ್ಲುಬಾಯಿ**— ಗ್ರಂಥ! ಧರ್ಮ! ಗ್ರಂಥ ಬರೆದವನೊಬ್ಬ ಮಾನವ. ಧರ್ಮದ ಕಟ್ಟಳೆ ಮಾಡಿದವನೊಬ್ಬ ಮಾನವ. ಧರ್ಮದ ಅರ್ಥವ ವಿಪರೀತಮಾಡಿ ಶಾಸ್ತ್ರ ಬರೆದವನು ಮಾನವನಲ್ಲ ದಾನವನು. ಮಾನವಧರ್ಮ ಒಂದೇ ಎಂದು ಹೇಳಿದವನು ಮುನಿ. ಇದುವೇ ಗ್ರಂಥದ ಒಳಧ್ವನಿ. ನೀವು ಹೇಳುವ ಧರ್ಮ ಹೆರವರನ್ನು ಹೆದರಿಸಿ ಹೊಟ್ಟೆತುಂಬಿಕೊಳ್ಳುವ ಸುಳ್ಳುಧರ್ಮ.

**ಶಿಲಾಕಾಂತ**— ಕಲ್ಲು! ಪ್ರತ್ಯುತ್ತರದ ಪ್ರಕರಣ ಹೆಚ್ಚೆಚ್ಚು ಬೆಳೆಯ ಹತ್ತಿತು. ಇನ್ನು ಮಾತು ಬೆಳಿಸಿದರೆ ನಿನ್ನನ್ನು ನಿನ್ನ ತವರೂರಿಗೆ ಕಳಿಸಿಬಿಡುತ್ತೇನೆ. ರಾಜಿನಾಮೆ ಕೊಟ್ಟುಬರುತ್ತೇನೆ.

**ಕಲ್ಲುಬಾಯಿ**— ಮಾತು ಮಾತಿಗೆ ತವರೂರಿಗೆ ಕಳಿಸುವೆನೆಂದು ಹೇಳುವದು ಇದಾವ ನಿಮ್ಮ ಧರ್ಮ. ಗಂಡನು ಹೆಂಡತಿಗೆ ರಾಜಿನಾಮೆ ಕೊಡುವಕಾಲ ಈಗಿಲ್ಲ. ನಿಮ್ಮನ್ನು ಮಾಡಿಕೊಂಡು ನಾನೇನು ಸುಖವನ್ನು ಕಾಣಲಿಲ್ಲ.

**ಶಿಲಾಕಾಂತ**— ಕಲ್ಲು! ಮಾತಿಗೆ ಮಾತು ಬೆಳೆದು ಮನೆಯ ಗೃಹಚಾರವೇ ಕೆಟ್ಟೀತು. ನಮ್ಮೊಳಗೆ ನಾವು ಒಪ್ಪಂದ ಮಾಡಿಕೊಂಡು ಚೊಕ್ಕ ಚಿನ್ನದಂತಹ ಸಂಸಾರವನ್ನು ಅಕ್ಕರದಿಂದ ಸಾಗಿಸುವಾ. ಸ್ನಾನದ ಹೊತ್ತಾಯಿತು ನಡೆ ಹೋಗುವಾ.



# ೨ ನೇ ಅಂಕ

## ೧ ನೇ ಪ್ರವೇಶ

ಸ್ಥಳ;- ಜೀವನನ ಗುಡಿಸಲು

**ಜೀವನ**-- ಶಿವ! ಶಿವಾ!! ಅಸ್ಪೃಶ್ಯರೆನಿಸಿಕೊಳ್ಳುವ ನಮ್ಮ ಸಮಾಜವನ್ನು ಉಚ್ಚ ವರ್ಣದವರು ನಿರ್ಧಯದಿಂದ ತುಳಿಯುತ್ತಿದ್ದಾರೆ. ತಮ್ಮ ಸುಖದಸಲುವಾಗಿ ನಮ್ಮನ್ನು ದುಡಿಸಿಕೊಂಡು ಜೀವನದ ಸುಖ-ಸೌಲಭ್ಯಗಳನ್ನು ಸದೆಬಡಿದು ಬಡತನದಲ್ಲಿ ನೂಕಿದ್ದಾರೆ. ಪತೀತರೆಂದು ಪುರದ ಹೊರಗೆ ಇಟ್ಟು ಪಶುಗಳಿಗಿಂತಲೂ ಕೀಳಾಗಿ ಕಾಣುತ್ತಿದ್ದಾರೆ. ಸುಖಕ್ಕಾಗಿ ಸ್ವತಂತ್ರ ಸಂಪಾದನೆ. ಸುಖವೇ ಎಲ್ಲರ ಗುರಿ. ಹೀಗಿದ್ದು ಸುಖದ ಸವಿಗನಸು ಕಾಣದ ನಮ್ಮ ಸಮಾಜ ನಿತ್ಯ ಕಣ್ಣೀರು ಕರೆಯುತಿದೆ. ಭಾರತದಲ್ಲಿ ಹುಟ್ಟಿ ಬೆಳೆದವರೆಲ್ಲರೂ ಬಂಧು ಬಾಂಧವರಿದ್ದು ಅವರಲ್ಲಿ ಮೇಲು-ಕೀಳು ಎಂಬ ಭೇದ-ಭಾವ ಎನ್ನ ಕರುಳು ಕತ್ತರಿಸುತಿದೆ. ಸಂತಾಪದ ಜ್ವಾಲೆಗಳು ಅಂತ್ಯಜರ ದೇಹ ದಹಿಸುತಿವೆ. ದೇವಾ! ಅಸ್ಪೃಶ್ಯರ ಬಿಸಿಯುಸಿರು ನಿನ್ನ ಮಂದಿರಕ್ಕೆ ಮುಟ್ಟಲಾರದೆ.

**ಪದ**

ರಾಗ- ತೆಲಂಗ ತಾಳ- ತ್ರಿವಿಟ

ಭೀಕರಯಾತನೆ ಸಹಿಸೆನಾ। ಒಡಲತಾಪದಿ ಮಮಮನಾ।
ಸುಡುತಿಹುದೀ ಹೃದಯಾ ||ಪ||
ಕರುಳಿನ ಕೊರಗು ತಾಳೆನಾ। ಹೊಳೆಯದು ಬಾಳಿನ ಬೆಳಕಾ।
ಜಾತಿಯ ಜ್ವಾಲೆಯಲಿ ಬಂದಿಹೆನಾ। ನೀಡುತ ದಯವನು ಪರಿ
ಪಾಲಿಸೋ। ದೀನದಯಾಳೋ||

**ನೀಲಾ**— (ಪ್ರ) ಅಣ್ಣಾ! ಎಂದಿಲ್ಲದ ಚಿಂತೆ ಇಂದೇಕೆ?

**ಜೀವನ**— ಚಿಂತೆ! ಚಿಂತೆಯ ಚಿತೆಯು ಹೃದಯದ ಹುತ್ತಿನಲ್ಲಿ ಹೊಕ್ಕು ಸುಡುತಿದೆ. ಗಾಯಗೊಂಡ ಹೃದಯದ ನೋವು ಹಗುರಮಾಡಿ ಕೊಂಡೆನು ಎನ್ನ ಭಾಗ್ಯವ ಹಳಿದು.

**ನೀಲಾ**— ಅಣ್ಣಾ! ಆದಾವ ಚಿಂತೆಯ ಚಿತೆಯು ನಿಮ್ಮ ದೇಹವ ದಹಿಸುತಿದೆ. ನನ್ನಿಂದೇನಾದರೂ ಕುಂದು ಬಂದಿರುವದೇ ಹೇಳು.

**ಜೀವನ**— ನಿನ್ನಿಂದ ಕುಂದಿಲ್ಲ. ಕುಂದಿನ ಕಲ್ಪನೆಯೂ ನನಗಿಲ್ಲ ತಂಗಿ!

**ನೀಲಾ**— ಅದಾವ ಸನ್ನಿವೇಶ ಘಟಸಿ, ನಿನ್ನ ಹೃದಯ ಘಾಯ ಗೊಳಿಸಿ, ಕಂಗಳಲಿ ಕಣ್ಣೀರು ಪುಟಿಸಿ ಹೃದಯದಿ ಬಿಸಿಯುಸಿರು ಕರೆಯ ಹಚ್ಚಿದೆ ಬೇಗ ಹೇಳು.

**ಜೀವನ**— ನೀಲಾ! ಸಮಾಜದ ತಿಳುವಳಿಕೆಯಲ್ಲಿ ಅಸ್ಪೃಶ್ಯರು ನಾವು. ಅಸ್ಪೃಶ್ಯರಿಗಾಗಿ ವಿಶ್ವವೇ ಕುರುಡಾಗಿದೆ, ಕಿವುಡಾಗಿದೆ, ಕಠೋರ ವಾಗಿದೆ. ಕಲ್ಲನ್ನು ಕರಗಿಸುವ ಕರುಣ ಸ್ವರಕ್ಕೂ ಸಮಾಜದ ಕಿವಿ ಕೇಳಿಸ ದಾಗಿದೆ. ಕಷ್ಟ-ಕಾರ್ಪಣ್ಯದ ಗುಡುಗು, ಮಿಂಚು, ಸಿಡಿಲಿನಿಂದ ಕೂಡಿ ರುವದು ನನ್ನ ಬಾಳಮುಗಿಲು. ನಮ್ಮ ತಂದೆ-ತಾಯಿಗಳು ಹುಟ್ಟಿದಾಗಲೆ ನಮ್ಮನ್ನು ಕುತ್ತಿಗೆ ಹಿಚುಕಿ ಚಲ್ಲಿದ್ದರೆ ಹೃದಯದ ಕಿಚ್ಚು ಅಂದೇ ನಂದಿ ಹೋಗುತ್ತಿತ್ತು. ತಂಗಿ! ಈ ಪಾಪಮಯ ಪುಂಜವು ಜಾತಿಯ ಜ್ವಾಲೆ ಯಲ್ಲಿ ಬೆಂದುಹೋಗಲೆಂದು ಬರೆದಿರುವನು ಬ್ರಹ್ಮನು ನನ್ನ ಜಲ್ಮಕುಂಡಲಿ ಯಲ್ಲಿ. ಈ ಕಷ್ಟಮಯ ಜೀವಿತಕ್ಕೆ ಬಿಡಬೇಕಿನ್ನು ತಿಲಾಂಜಲಿ.

**ನೀಲಾ**— ಅಣ್ಣಾ! ಈ ಸ್ವಾತಂತ್ರ್ಯ ಯುಗವು ವಿಶ್ವಕ್ಕೆ ಮಾನವೀ ಯತೆಯ ಹೊತ್ತಿಗೆಯನ್ನು ಬಿಚ್ಚಿ ಓದಲು ಹಚ್ಚಿದೆ. ಜಗತ್ತಿನಲ್ಲಿರುವವರೆ ಲ್ಲರು ಒಂದು ಕುಟುಂಬದವರೆಂಬ ಭಾವನೆ ಬೆಳೆಯುವಾಗ ನಾವು ಕೀಳ ರೆಂಬ ಕಲ್ಪನೆ ಏಕೆ? ನಿಷ್ಠುರವಾದ ನುಡಿಗಳೇಕೆ ಹೃದಯ ಕುಂಡಲಿಯಲಿ? ಕಣ್ಣೀರುಗಳೇಕೆ ಕಂಗಳಲಿ?

**ಜೀವನ**— ನೀಲಾ! ಮಾನವೀಯತೆಯ ಹುಚ್ಚು ಜಗತ್ತಿಗೆ ಹಿಡಿ ದರೂ ಜಾತಿ ಮಾತ್ಸರ್ಯದ ಕಿಚ್ಚು ಕಡಿಮೆಯಾಗಿಲ್ಲ. ಅಸ್ಪೃಶ್ಯರಾದ ನಮಗೆ

ಆಡ್ಡಾಡಲು ಸ್ಥಳವಿಲ್ಲ ಉಸುರಾಡಿಸಲು ಹವೆಯಿಲ್ಲ ಮಲಗಲು ಮನೆಯಿಲ್ಲ ಕುಡಿಯಲು ನೀರಿಲ್ಲ. ನಿಂತರೆ ನಡೆದರೆ ಮಾತಾಡಿದರೆ ಅವಮಾನದ ಶೂಲಗಳು ಕಾಯುವ ಚುಚ್ಚಿ ನೆತ್ತರ ತೆಗೆಯುತಿರುವವು ನೀಲಾ!

**ನೀಲಾ**— ಹೊಲೆಯ ಕುಲದಲ್ಲಿ ಹುಟ್ಟಿದ ನಾವು ಹೊಲೆಯರು ಅಹುದು ಆದಕೇಕೆ ನಿಡಿದುಸಿರು?

**ಜೀವನ**— ಮುಟ್ಟಲಾರದ ಮಾನವರು ನಾವು ತಂಗಿ! ಉಚ್ಚಕುಲಜರ ಮನೆಯಂಗಳದಲ್ಲಿ ನಿಂತರೆ ನೆಲವೆದ್ದು ಬಡಿಯುವದು. ಗೆಳೆಯರೆಂದರೆ ಕಳಚುವದು ಅವರ ಉಚ್ಚಕುಲದ ಕವಚ. ಮುಟ್ಟಿದರೆ ನಂಜೇರುವದು ಅವರ ದೇಹ! ದೇವಮಂದಿರದಲಿ ಸೇರಿದರೆ ಬರುವದು ಅವರ ದೇವರಿಗೆ ಸೂತಕ!! ಅಂತ್ಯಜರ ಜೀವನ ಹಾಳು ಗೋಳು ನೀಲಾ!

**ನೀಲಾ**— ಸುಶಿಕ್ಷಿತನಾದ ನೀನು ಹೀಗೆ ಬಿಸಿಯುಸಿರು ಕರೆದರೆ ಆಶಿಕ್ಷಿತರಾದ ನಮ್ಮ ಸಮಾಜ ಹೇಗೆ ಮಾಡಬೇಕು? ಕುಲಜರು ನೀವಯ್ಯ ಹೊಲೆಯರು ನಾವಯ್ಯ. ಕುಲಹೊಲೆಗೆ ಸಂಬಂಧವುಂಟೆ? ನೆಲೆಕಲೆ ತಿಳಿಯದೆ ಹಲಬುಗೆಟ್ಟವರಂತೆ ಛಲತೊಟ್ಟು ನುಡಿಯಲು ಬೇಡ! ಎಂದು ನಮ್ಮಪ್ಪ ಶಿವಶರಣ ಹರಳಯ್ಯ ಮದವೇರಿದ ಮದುವಯ್ಯಗೆ ಮೃದುಮಾತಿನಿಂದ ಹೇಳಿಲ್ಲವೇ? ನೀನು ತಿಳಿದವನಿದ್ದು ಕುಲದ ಛಲಕ್ಕೆ ಚಿಂತೆಯೇ?

**ಜೀವನ**— ತಂಗಿ! ನೀನೆಷ್ಟು ಹೇಳಿದರೂ ದುಃಖ ಕಡಿಮೆಯಾಗದಮ್ಮಾ! ನಾವು ಕೀಳು ಕುಲಜರು.

**ನೀಲಾ**— ಅಣ್ಣಾ! ಹೊಲೆಯರು ಮಾದಿಗರು ಕೀಳರೆಂದು ಭಾವಿಸಬೇಡ

ಹೊಕ್ಕಲ್ಲಿ ಹೊಕ್ಕು ನಿಮ್ಮ ಒಕ್ಕುವ ನಂಬುವನ ಕುಲವೇನೋ
ದೇವ ನೀ ನೊಲಿದವನ ಸ್ವಾಮಿ ನೀ ಹಿಡಿದವನ ಕುಲವೇನೋ
ಕುಲಕ್ಕೆ ತಿಲಕ ನಮ್ಮ ಮಾದರ ಚನ್ನಯ್ಯನ ಕುಲ ನಮ್ಮಿಂದಲಧಿಕ
ಕೂಡಲಸಂಗಮದೇವಾ||

ಅಂದು ಮಹಾತ್ಮಾ ಬಸವಣ್ಣನವರು ಕುಲದ ವಿಷಯವಾಗಿ ಹೇಳಿ

ದ್ದಾರೆ. ಇಂದು ಜನತಾ ಸರಕಾರ ಅಸ್ಪೃಶ್ಯನಿವಾರಣೆ ಕಾರ್ಯ್ದಮಾಡಿ ಪತೀ ತರನ್ನು ಉದ್ಧಾರಮಾಡಲು ಸಿದ್ಧರಾಗಿಲ್ಲವೇ? ಅದಕ್ಕಾಗಿ ಕಣ್ಣೀರು ಬೇಡಣ್ಣಾ.

**ಜೀವನ—** ಮಹಾತ್ಮಾ ಬಸವಣ್ಣನವರು ಅಸ್ಪೃಶ್ಯತೆಯನು ನಿವಾರಿಸಲು ಪ್ರಯತ್ನಿಸಿದರೂ ಅಂತ್ಯಜರು ಅಂತ್ಯಜರಾಗಿಯೇ ಉಳಿದಿದ್ದಾರೆ. ಮಾನವರ ಮನದಲಿ ಮಾನವ ಸಮಾನತೆ ಬಂದರೆ ಈ ಕಾರ್ಯ್ಕೆಗೆ ಕಳೆ ಬರುವದು ನೀಲಾ!

**ಇಂದುಧರ—** (ಪ್ರ) ಭಾರತದ ಮೂಲೆ ಮೂಲೆಗಳಲಿ ಅಸ್ಪೃಶ್ಯ ನಿವಾರಣೆಯ ಕೂಗು ಕೇಳುತಿದೆ. ಅಂತ್ಯಜರ ಕೊರಗು ಕರಗುತಿದೆ. ಜಾತ್ಯಾತೀತ ರಾಷ್ಟ್ರ ನಿರ್ಮಾಣದ ಕ್ರಾಂತಿಕಾರಕ ಚಟುವಟಿಕೆಗಳು ನಡೆಯುತಿವೆ. ಸಂಪೂರ್ಣ ಅಸ್ಪೃಶ್ಯ ನಿವಾರಣೆಯಾಗುತಿದೆ. ಜೀವನಾ! ಮಾತಿನಂತೆ ಮನವಿರಿಸಿಕೊಂಡು ಸಮಾಜಕ್ಕೆ ಮಾನವ ಧರ್ಮದ ತತ್ವ ತಿಳಿಸಿದರೆ ಈ ಕಾರ್ಯ್ದಗೆ ಕಳೆ ಬರುವದು.

**ಜೀವನ—** ಇಂದುಧರಾ! ಬುನಾದಿಕಾಲದಿಂದಲೂ ಭಾರತದಲ್ಲಿ ಬೇರು ಬಿಟ್ಟ ಜಾತಿಯತೆಯ ಮಹಾ ವೃಕ್ಷವನ್ನು ಕಿತ್ತಿ ಬಿಸುಡುವ ಶಕ್ತಿ ಈ ಹೊಸ ಕಾರ್ಯ್ದಯಲ್ಲಿದೆ ಎಂಬುದು ಗೊತ್ತಿದೆ. ಆದರೆ ಈ ಕೀಳು ಕುಲಜರಮೇಲೆ ಕರುಣೆ ಮಾಡುವದನ್ನು ಕಂಡು ನಿಮ್ಮವರು ಮುನಿಯಲಿಕ್ಕಿಲ್ಲವೇ.

**ಇಂದುಧರ—** ಯಾರು ಮುನಿದು ಮಾಡುವದೇನು? ಊರು ಮುನಿದು ಮಾಡುವದೇನು? ಮಾನವರಿಗೆ ಮಾನವ ಧರ್ಮ ತಿಳಿಸುವ ದೃಢ ನಿರ್ಧಾರ ಮಾಡಿದಾಗ.

**ನೀಲಾ—** ಈ ಮುಟ್ಟಲಾರದ ಮಾನವರಮೇಲೆ ಎಷ್ಟು ನಿಮ್ಮ ಮಮತೆ. ನಿಮ್ಮ ಬೋಧನೆಯು ಬೆಂದ ಜೀವನಕ್ಕೆ ಆನಂದವ ನೀಡಿತು. ಸ್ಮರಿಸಿದೊಡನೆ ಹಕ್ಕಿಯಂತೆ ಹಾರಿಬರುವ, ಕೂಗಿದೊಡನೆ ಸಾಗಿಬರುವ

ಪ್ರೇಮ ಪ್ರಕಾಶದಿಂದ ಈ ಪತೀತರ ಮನಮಂದಿರವು ಪುನೀತವಾಯ್ತು.

**ಇಂದುಧರ—** ನೀಲಾ! ಸರ್ವ ಜೀವಿಗಳಮೇಲೆ ದಯ ತೋರಿಸುವದೇ ಮಾನವಧರ್ಮ. ಈ ಧರ್ಮದ ತತ್ವದತ್ತ ಸಾಗುವದೇ ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ನಾನು ನನ್ನ ಕರ್ತವ್ಯ ಮಾಡಿದ್ದೇನೆ. ಜೀವನಾ ಕಾಲೇಜಕ್ಕೆ ಹೋಗುವಾ ನಡೆ.






# ೨ ನೇ ಪ್ರವೇಶ

( ಸ್ಥಳ:- ಸುರೇಶನ ಮನೆ      ಸಮಯ- ಮುಂಜಾವು )

**ಸುರೇಶ—** (ಸ್ವ) ಬೆಡಗಿನ ಬಾಲೆಯಾದ ನೀಲೆಯ ರೂಪ ಕಾಂತೆ ಎನ್ನ ತನು-ಮನವ ಕಟ್ಟಿಹಾಕಿದಂದಿನಿಂದ ಮನಕೆ ನೆಮ್ಮದಿಯಿಲ್ಲ. ಮುದ್ದು ಸುರಿಯುವ ಮುಖ, ಚಿಗುರೆಲೆಯಂತಹ ಚೆಂದುಟಿ, ಎಳೆ ಬಳ್ಳಿಯಂತಹ ತೋಳುಗಳು, ಸಡಿಲಾದ ಕೇಶಪಾಶ, ಕುಪ್ಪಸದ ಮರೆಯಲ್ಲಿ ತೂಗಾಡುವ ಕುಂಬ ಕುಚಗಳನ್ನು ನೋಡಿದ ಕೂಡಲೇ ಕಾಡುತಿಹನು ಕಾಮನು ನನ್ನನ್ನು ರತಿಸುಖದ ಸಂಭ್ರಮಕ್ಕಾಗಿ. ಈ ಸೌಂದರ್ಯದ ಕೆನೆಯನ್ನು ಸ್ವಾದಿಸಲು ಹಾರುತಿದೆನ್ನ ಎದೆಯಾಶೆ. ಆದರೆ ಮಾಡಲೇನು ಹಣದ ಕೊರತೆ ತನು-ಮನವ ಕೊರೆಯುತಿದೆ. ಧನದತ್ತರು ಸಿರಿವಂತರು ಮುದಿ ಇದ್ದರೂ ಮಕ್ಕಳಿಲ್ಲ. ನಮ್ಮ ಇಂದ್ರಾನನ್ನು ಇವರಿಗೆ ಕೊಟ್ಟರೆ ಧನದ ಕೊರತೆ ದೂರಾಗುವದು. ಆದರೆ ದ್ವಿಪತ್ನಿ ಕಾಯ್ದೆಯ ಭಯವೊಂದಿದೆ. ಹಾ! ಈ ಕಾಯ್ದೆಯ ಕಣ್ಣು ತಪ್ಪಿಸುವ ಉಪಾಯ ಮುತ್ಸದ್ದಿಯಾದ ನನ್ನ ಮೆದುಳಿಗೆ ಹೊಳೆಯದಿರದು ಮರೆಯಲ್ಲಿ ಮದುವೆ ಮಾಡಿದರಾಯಿತು. (ಪ್ರ) ಇಂದ್ರಾ!

**ಇಂದ್ರಾ—** (ಒಳಗಿನಿಂದ ಬಂದು) ಯಾಕಣ್ಣಾ!

**ಸುರೇಶ—** ತಂಗಿ! ನಿನ್ನ ವಿವಾಹದ ವಿಷಯವಾಗಿ ಸಿರಿವಂತರ ಮನಿಗೆ ಹೋದರೆ ಹತ್ತು ಸಾವಿರ ರೂಪಾಯಿ ವರದಕ್ಷಿಣೆ ಕೊಡದಹೊರತು ಮಾತೆತ್ತಬೇಡಿರೆಂದು ಸ್ಪಷ್ಟವಾಗಿ ಹೇಳುತಿಹರು. ಅದಕ್ಕಾಗಿ ಚಿಂತೆ.

**ಇಂದ್ರಾ—** ನನ್ನ ವಿವಾಹದ ವಿಷಯವಾಗಿ ಚಿಂತಿಸಬೇಡ. ನನ್ನ ಸಲುವಾಗಿ ಹಣ ಸುರುವಿ ನಿನ್ನ ಮನೆ ಹಾಳು ಮಾಡಿಕೊಳ್ಳಬೇಡ.

**ಸುರೇಶ—** ತಂಗಿ! ಬಿಸಿಯುಸಿರು ಕರೆದರೆ ನನ್ನ ದೇಹವೇ ಕುಸಿದು ಬೀಳುವದು. ನೀನು ಕಣ್ಣೀರು ಕರೆದರೆ ನನ್ನ ಹೃದಯ ಕರಗಿ ನೀರಾಗು

ವದು. ಇಂದ್ರಾ! ನಿನ್ನ ಭವಿಷ್ಯತ್ಕಾಲದ ಬಾಳಜ್ಯೋತಿ ಪ್ರಕಾಶಮಾನವಾಗಲು ಸಿರಿವಂತ ವರನ ಶೋಧಮಾಡಿದ್ದೇನೆ. ನಿನ್ನ ಸಮ್ಮತಿ ಸಿಕ್ಕರೆ ಮದುವೆಯ ಸಮಾರಂಭದ ಸಿದ್ಧತೆ.

**ಇಂದ್ರಾ**— ಅಣ್ಣಾ! ಸ್ತ್ರೀಯರಿಗೆ ವಿವಾಹವೆಂಬ ಸುಖದ ಆಶ್ರಯ ದೊರಕುವದು ದೈವಿಶಕ್ತಿಯ ಸಾಹಸ. ಮಾನವರ ಸಾಹಸ ವ್ಯರ್ಥ ಹವ್ಯಾಸ ನನ್ನ ಮದುವೆಗಾಗಿ ನಿನ್ನ ಮೆದುಳುಕೆಡಿಸಿಕೊಳ್ಳದಿರು.

**ಸುರೇಶ**— ಮನೆಯ ಹಿರಿಯರು ತಮ್ಮ ಹೆಣ್ಣುಮಕ್ಕಳ ವಿವಾಹದ ವಿಚಾರ ಮಾಡುವದು ಮಾನವ ಧರ್ಮದ ಶಿಷ್ಟಾಚಾರ! ಆ ಶಿಷ್ಟಾಚಾರಕ್ಕೆ ತಕ್ಕಂತೆ ನಿನ್ನ ಭಾವಿಜೀವನದ ಸುಖಾಸುಖಗಳನ್ನು ವಿಚಾರ ತಕ್ಕಡಿಯಲ್ಲಿಟ್ಟು ತೂಗಿ ಒಂದು ನಿರ್ಧಾರಕ್ಕೆಬಂದು ಮದುವೆಯ ಮಾತೆತ್ತಿರುವೆ.

**ಇಂದ್ರಾ**— ಅಣ್ಣಾ! ನನ್ನನ್ನು ಅದಾರಿಗೆ ಕೊಡುವ ವಿಚಾರ ಮಾಡಿರುವಿ.

**ಸುರೇಶ**— ಸಿರಿವಂತ ಧನದತ್ತರಿಗೆ.

**ಇಂದ್ರಾ**— ಅಣ್ಣಾ! ನಿನ್ನ ತಂಗಿಯನ್ನು ಮುದಿಹದ್ದಿನ ಪದರಿನಲ್ಲಿ ಕಟ್ಟಿ ಕಷ್ಟದ ಕಂದರದಲ್ಲಿ ನೂಕಬೇಡ. ನಿನ್ನ ತಂಗಿಯ ಹಣೆಗೆ ಮಲ್ಲಿಗೆಯ ಹೂವಿನದಂಡೆ ಕಟ್ಟಿಸುವದನ್ನು ಬಿಟ್ಟು ಜೀವದ ಹೆಣಕೆ ಕೊಟ್ಟು ಮುತ್ತಿನದಂಡೆ ಕಟ್ಟುವ ಹಣೆಗೆ ಮುಳ್ಳಿನದಂಡೆಯನ್ನು ಕಟ್ಟಿಸಲು ಪ್ರಯತ್ನಿಸಬೇಡ. ಕರ್ಮದ ಕೈಲೆ ಅರಿಷಣ ಹಚ್ಚಿಸಿ ನನ್ನ ದೇಹವ ಸುಟ್ಟು ಅದರ ಭಸ್ಮ ತಿಲಕವನ್ನಿಟ್ಟುಕೊಳ್ಳಬೇಕೆಂದು ಮಾಡಿರುವಿಯೊ? ಹೇಸಿ ಆಸ್ತಿಯ ಆಶೆಗಾಗಿ ಜೀವನ ಹಾಳು ಮಾಡಿಕೊಳ್ಳುವ ಮೂಢಳು ನಾನಲ್ಲ. ಬೇಡ ಅಣ್ಣಾ! ಮದುವೆಯಾಗುವ ಹಟ ನಾನೇನು ಹಿಡದಿಲ್ಲ.

**ಸುರೇಶ**— ಇಂದ್ರಾ! ಲಕ್ಷಾಧೀಶ ಧನದತ್ತ ಅವನ ಬಾಗಿಲದ ಬಳಿಯಲಿ ಬಾಯ್ದೆರೆದು ನಿಂತಿಹಳು ಲಕ್ಷ್ಮಿ! ಅವನ ನಡುಮನಿಯಲಿ ನಲಿದಾಡುಹಳು ಸರಸ್ವತಿ! ಕುಬೇರನು ಕೈಕಟ್ಟಿಕೊಂಡು ನಿಂತಿಹನು ಅವನ

ಮನೆಯಂಗಳದಲಿ. ತಂಗಿ! ಧನದತ್ತರ ಮದುವೆಯಾದರೆ ನಿನ್ನ ಸೌಭಾಗ್ಯಕ್ಕೆ ಯಾರೂ ಸರಿ ಇಲ್ಲ.

ಇಂದ್ರಾ— ಅಣ್ಣಾ ಮುಚ್ಚಂಜೆಯಲಿ ಮೃತ್ಯುವಿನ ಮನೆ ಸೇರುವದು ಅವನ ಹಣ್ಣಾದ ದೇಹ! ಬೆಳಗಾದರೆ ಗೂಗೆಯಾಡುವವು ಅವನ ಬಂಗ್ಲೆಯಲಿ ಆ ಹೆಣದ ಹಣೆಗೆ ಕಣಗಲದ ಹೂವನು ಕಟ್ಟುವದು ಬಿಟ್ಟು ನಿನ್ನ ತಂಗಿಯನು ಕೊಟ್ಟು ಬಾಸಿಂಗದ ಸಿಂಗಾರ ಮಾಡಲು ಹೊರಟಿ ನಿನ್ನ ಜನ್ಮಕ್ಕೆ ಧಿಃಕಾರ.

ಸುರೇಶ— ಮುಚ್ಚು ಬಾಯಿ ಎನ್ನ ಮನಕೆ ಮೆಚ್ಚಿದವರನ್ನು ಮದುವೆಯಾಗುವದು ನಿನ್ನ ಕೆಲಸ.

ಇಂದ್ರಾ— ಮದುವೆ ಮಾಡಿಕೊಳ್ಳುವವಳು ನಾನು ಅಣ್ಣಾ! ಹೆಣ್ಣೆಂದರೆ ಪಂಜರದ ಗಿಳಿಯಲ್ಲ ಬುದ್ಧಿ ಆಶೆಯಿದ್ದ ಮಾನವಜೀವಿ. ಹಣದ ಆಶೆಗಾಗಿ ಪೆಪ್ಪೆತ್ತವರು ತಮ್ಮ ಹೆಣ್ಣುಮಕ್ಕಳನ್ನು ಜೀವದಹೆಣಕೆ ಕೊಟ್ಟರೆ ಆ ಹೆಣ್ಣು ಕೊಟ್ಟವರನ್ನು ನಿತ್ಯ ಶಪಿಶಪಿಸಿ ಕಣ್ಣೀರು ಕರೆಯುವಳು. ಆ ಕಣ್ಣೀರಿನ ಪ್ರವಾಹದಲ್ಲಿ ಪಿತನ ಕುಲವೇ ತೇಲಿಹೋಗಿ ಮಹಾಸಾಗರದ ತಳವ ಸೇರುವದು. ನನ್ನ ಮನೋದೇವತೆಯು ಈಗಾಗಲೇ ಒಂದು ಪವಿತ್ರ ಮೂರುತಿಗೆ ನಿತ್ಯ ಆರತಿ ಮಾಡುತಿಹಳು.

ಸುರೇಶ— ಬಂಧುಬಳಗ ವಂಚಿಸಿ ವಿಷಯ ವಾಸನೆಗೆ ಮನಸೋತು ಮರೆಯಲಿ ಅದಾವನನು ಮೆಚ್ಚಿ ಆತ್ಮವಂಚನೆ ಮಾಡಿಕೊಂಡಿರುವಿ ಕುಲಕಂಟಕಿ!

ಇಂದ್ರಾ— ಕುಲಕಂಟಕಿ ನಾನಲ್ಲ. ಕುಲಕೆ ಕುಂದುತರುವ ಕಾರ್ಯ ಮಾಡಿಲ್ಲ ಮುಂದೆಯೂ ಮಾಡುವದಿಲ್ಲ. ಶೀಲ ಧರ್ಮದ ಕುಮಾರಿ ನಾ ಸಹೋದರಿಯ ಮುತ್ತೈದಿತನವ ಮಸಣದಲಿಟ್ಟು ರಂಡೆತನದ ಬೆಂಕಿ ಕುಂಡವ ನಿರ್ಮಿಸುವ ದಾನವರಿಗೆ ನಾ ಮಹಾಮ್ಮಾರಿ. ನನ್ನ ಮನಮೆಚ್ಚಿದವರನ್ನು ಲಗ್ನವಾಗಿ ಸ್ತ್ರೀ ಕುಲಕ್ಕೆ ಹಾಕಿಕೊಡುವೆ ದಾರಿ.

ಸುರೇಶ— ಇಂದ್ರಾ! ಹಿರಿಯರ ಮಾತು ಮೀರಿ ಮನಮೆಚ್ಚಿದವರ

ಲಗ್ನವಾಗುವೆನೆಂದು ಹೇಳುವದು ನಿನ್ನ ತಪ್ಪು! ಕುಲಧರ್ಮವ ಬಿಟ್ಟು ಮನ ಮೆಚ್ಚಿದವರ ಮದುವೆಯಾಗಿ ಮನೆಯ ಕೀರ್ತಿಗೆ ಹಚ್ಚದಿರು ಕಪ್ಪು.

**ಇಂದ್ರಾ**— ಅಣ್ಣಾ! ಕುಲದ ತೊಡಕನ್ನು ಕಡಿದೊಗೆದು ನನ್ನ ಮನಮೆಚ್ಚಿದವರ ಮದುವೆಯಾಗಿ ಸ್ತ್ರೀಧರ್ಮದಂತೆ ನಡೆವೆ ಇಲ್ಲವೆ ಕುಮಾರಿಯಾಗಿ ಕಾನನ ಸೇರಿ ಅಕ್ಕಮಹಾದೇವಿಯಂತೆ ಆಧ್ಯಾತ್ಮಿಕ ವಿಚಾರಗಳನು ಜನತೆಗೆ ತಿಳಿಸುತ್ತ ತಿರುಗುವೆ.

**ಸುರೇಶ**— ಇಂದ್ರಾ! ಆದಾವ ಕಾಮುಕನ ಕರ ಹಿಡಿಯಲು ಹೊಂಚು ಹಾಕಿರುವಿ ಕುಲಘಾತಕಿ.

**ಇಂದ್ರಾ**— ಅಣ್ಣಾ! ಮದುವೆಯಾಗುವ ಮುನ್ನ ಆವನೊಬ್ಬನ ಕೂಡ ವಿಲಾಸ ಮಾಡಿ ಮುಂದೆ ಹಿರಿಯರ ಮಾತಿಗೆ ತಲೆಬಾಗಿ ಮತ್ತೊಬ್ಬರ ಮದುವೆಯಾಗಿ ಕೀಳು ಸಂಸಾರ ಮಾಡುವ ಮರುಳ ಹೆಂಗಸು ನಾನಲ್ಲ. ಮದುವೆಯಾಗುವ ಮೊದಲು ಮನಬಂದವರ ಕೂಡ ಸರಸವಾಡಿ ಬಸಿರು ಬೆಳೆಯಲು ಜನಕಂಜಿ ಮನೆಯವರ ಕಣ್ಣು ತಪ್ಪಿಸಿ ಹಡೆದು ತಿಪ್ಪಿಯ ಕುಂಡಿಯಲಿ ಪಿಂಡವ ಹುಗಿದು ಹೊಟ್ಟೆಯ ಹಗುರು ಮಾಡಿಕೊಂಡು ಮುತ್ತೈದೆಯಾಗಲು ಬಯಸುವ ಅಪವಿತ್ರ ಸ್ತ್ರೀ ನಾನಲ್ಲ. ಕಾಮವ್ಯಸನಕೆ ಹಿಗ್ಗಿ ಶ್ರಿಂಗಾರವಾಗಿ ಸುಳಿಸುಳಿದು ಕಾಮುಕರಬಳಿ ಸಾರ್ವ ಹೇಸಿಹೆಂಗಸು ನಾನಲ್ಲ. ಅಣ್ಣಾ!! ಮೊದಲು ಮೆಚ್ಚಿದವನು ಯಾವ ಜಾತಿಯವನೇ ಇರಲಿ ಅವನೆನ್ನ ಭವಾಬ್ಧಿಯಲ್ಲಿ ತೇಲುತ್ತಿರುವ ಜೀವನ ನೌಕೆಗೆ ಧೃವ ನಕ್ಷತ್ರ. ಅವನೆನ್ನ ಸ್ಥಿರಮಂಗಲಾತ್ಮ.

**ಸುರೇಶ**— ಇಂದ್ರಾ! ನೀನಾಡುವ ನುಡಿಗೆ ಗಾಯಗೊಂಡಿದೆ ನಿನ್ನ ಬಂಧುವಿನೆದೆ. ನಿನ್ನ ಮಾತಿನಲ್ಲಿ ಹದಿಬದಿಯ ಧರ್ಮದ ತಿರುಳಿಲ್ಲ. ನಿನ್ನ ವಿಚಾರದಲ್ಲಿ ಹುರುಳಿಲ್ಲ. ಧರ್ಮದ ಅಂಜಿಕೆ ಆಳುಕಿಲ್ಲ. ಮುಸುಕಿಹುದು ನಿನ್ನ ಮನದಿ ಘನವಾಯೆ. ಜಾತಿ-ಮತವ ಬಿಟ್ಟು ಮನಮೆಚ್ಚಿದವರ ಲಗ್ನವಾಗುವದರ ಮರ್ಮ, ಕಾಮವಾಸನೆಯಿಂದ ರಚಿಸಿದ ಹಗರಣೆಯರ ಧರ್ಮ. ಇಂದ್ರಾ! ಕುಮಾರಿಯರು ಕಾಮವಾಸನೆಗೆ ಓಗೊಟ್ಟು ಸ್ತ್ರೀ ಧರ್ಮವ ಬಿಟ್ಟು ಅಧರ್ಮದಲ್ಲಿ ಕಾಲಿಟ್ಟಾಗಲೇ ಕಲಂಕದ ಕಿಡಿಯು ದಹಿಸು

ವದು ತಂದೆ-ತಾಯಿಗಳ ದೇಹವನು. ಕೊಲೆಗೆ ಕೈ ಹಾಕಿಸಿ ನೆತ್ತರದ ನದಿ ಹರಿಸುವವಸು ಭರತ ಭೂಮಿಯಲ್ಲಿ. ಮರುಮಾತಾಡಿ ಮನ ನೋಯಿಸ ದಿರು ಧನದತ್ತರ ಲಗ್ನವಾಗಿ ಸುಖವಾಗಿ ಬಾಳು.

**ಇಂದ್ರಾ**— ಅಣ್ಣಾ! ಸಿರಿವಂತಿಕೆಯಲ್ಲಿಲ್ಲ ಸುಖ. ಪ್ರೇಮದಲ್ಲಿದೆ. ಪ್ರೇಮಕ್ಕಿಲ್ಲ ಜಾತಿ-ಮತಗಳ ಮೋಹ. ಒಲಿದೆದೆಯಿಂದ ಹರಿಯುವದು ಪ್ರೇಮಸುಧೆಯ ಪ್ರವಾಹ. ವಧು-ವರರೆಂಬ ನಾಮಕರಣವಾಗುವ ಶುಭ ಪ್ರಸಂಗವೇ ವಿವಾಹ! ಇದಕ್ಕೆ ಉತ್ಪಾತಗಳ ಉದಯವಿಲ್ಲ. ಪಾಪ ಕರ್ಮದ ಕೆಸರಿಲ್ಲ. ಅಣ್ಣಾ! ಬಲರಾಮನೆಷ್ಟು ಪೀಡಿಸಿದರೂ ತನ್ನ ಮನ ಮೆಚ್ಚಿದ ಅರ್ಜುನನನ್ನು ಲಗ್ನವಾದ ಸುಭದ್ರಾ. ದೇವತೆಗಳನ್ನು ಕಣ್ಣೆತ್ತಿ ನೋಡದೆ ನಳರಾಜನನ್ನು ಲಗ್ನವಾದ ದಮಯಂತಿ. ಸತ್ಯವಾನನನ್ನು ಮೆಚ್ಚಿ ಮದು ವೆಯಾದ ಸಾವಿತ್ರಿ. ಈ ಮಾತೆಯರ ಮಾರ್ಗದತ್ತ ಸಾಗಿ ಮುಕ್ತಿಯ ಮಹಾದ್ವಾರ ಸೇರುವೆ.

**ಪದ**

ಸತಿಯ ಧರ್ಮವು। ಅತುಲ ಪ್ರೇಮವು। ಸತತವಾಗಿ
ಅತಿತವ ಪ್ರೀಯಕರನಾ। ಅನ್ಯಾರಾಧನೆ ಅನ್ಯಥ
ಗೈಯರು। ಮನ್ನೆಯ ಸತಿಯರ ಮಾರ್ಗವ ಬಿಡರು॥( ಹೋಗುವಳು

**ಸುರೇಶ**— ಇಂದ್ರಾ! ಸಣ್ಣವಳೆಂದು ಸಲುಗೆಯಿಂದ ಬೆಳೆಯಿಸಿ ದ್ದರ ಪ್ರತಿಫಲ ಹೋಗು ಬುದ್ಧಿಗಲಿಸುವೆ ನಿನ್ನನ್ನು.

**ಶಿಲಾಕಾಂತ**— (ಪ್ರವೇಶ) ಇಲ್ಲೀನು ಗ್ರಹಚಾರ ಕೆಟ್ಟಿದ (ಪ) ಸಾವುಕಾರರೇ ಕಣ್ಣುಗಳು ಕೆಂಪಾಗಿರುವವೇಕೆ.

**ಸುರೇಶ**— ಇಂದ್ರಾ! ವ್ಯರ್ಥವಾಗಿ ಹಟಮಾಡಿದಳು. ಅದಕ್ಕಾಗಿ ತುಸು ಕೋಪ ಇರಲಿ ತಾವು ಬಂದ ವಿಷಯ.

**ಶಿಲಾಕಾಂತ**— ದೇವದಾಸರ ಮಗ ಇಂಧುಧರನು ಹೊಲೆಯರ ಹುಡುಗ ಜೀವನನ ಕಟ್ಟಿಕೊಂಡು ತಿರುಗಹತ್ತಿದ್ದಾನೆ. ಆಚಾರವಂತರಾದ ನಮ್ಮಕೂಡ ವ್ಯರ್ಥವಾಗಿ ವಾದಿಸುತ್ತಾನೆ. ಹೊಲೆಯರನ್ನು ದೇವಮಂದಿ

ರದಲ್ಲಿ ಪ್ರವೇಶ ಮಾಡಿಸಲು ಪ್ರಯತ್ನಿಸುತ್ತಾನೆ. ಇದಕ್ಕೆ ಏನು ಮಾಡಬೇಕು ಎಂಬ ವಿಚಾರಕ್ಕಾಗಿ ನಿಮ್ಮಲ್ಲಿಗೆ ಬಂದೆ.

**ಸುರೇಶ**— ಇಂದುಧರನು ಹೊಲೆಯರ ಹುಡುಗಿ ನೀಲೆಯ ರೂಪಕ್ಕೆ ಮರುಳಾಗಿ ಅಸ್ಪೃಶ್ಯ ನಿವಾರಣೆಯ ಸೋಗು ಹಾಕಿದ್ದಾನೆ. ಅಂಥವರನು ಬುದ್ಧಿಗಲಿಸದ ಹೊರತು ನಮ್ಮಂಥ ಧರ್ಮಶೀಲರ ಉಳಿಗಾಲವಿಲ್ಲ.

**ಶಿಲಾಕಾಂತ**— ಅದಕ್ಕೆ ಉಪಾಯ?

**ಸುರೇಶ**— ದೇವದಾಸರಿಗೆ ಹೇಳಿ ಜೀವನ ನೀಲೆಯರ ಮೇಲೆ ಸಾಲದ ಭಾರಹೇರಿ ಅವರನ್ನು ಹಣ್ಣುಮಾಡಬೇಕು. ಇಂದುಧರನು ಅಸ್ಪೃಶ್ಯರೊಡನೆ ಸಹಭೋಜನಕ್ಕೆ ಸಿದ್ಧನಾದ ಸಂಗತಿಯನ್ನು ಸಮಾಜಕ್ಕೆ ಹೇಳಿ ಅವನಿಗೆ ಬಹಿಷ್ಕಾರದ ಬೆದರಿಕೆ ಹಾಕಬೇಕು ಅಂದರೆ ಎಲ್ಲರೂ ಮೆತ್ತಗಾಗುವರು.

**ಶಿಲಾಕಾಂತ**— ಉತ್ತಮ ಉಪಾಯ ಈ ಕೆಲಸಕ್ಕೆ ಈಗಲೇ ಹೋಗುವಾ ನಡೆ.



## ೩ ನೇ ಪ್ರವೇಶ

(ಸ್ಥಳ:- ಜೀವನನ ಗುಡಿಸುಲ)

**ಜೀವನ—** ಪದ ರಾಗ- ಭೈರವಿ

ಸತತ ಸಂತತ ನೀಡೋ ಸುಶಾಂತ ಅತಿಪ್ರಲಾಪಿಯಾ ಮತಿಯ
ನರಿಯದೇಮನು ||ಪ|| ಜಾತಿಯ ಬಲೆಯಲಿ ಸೋತಿಹುದೀ ಜಗಾ
ನೀತಿನಿರಂತರ ನರಿಯದೇ ಖಲರಾ ||೧||

**ನೀಲಾ—** (ಪ್ರವೇಶ) ಅಣ್ಣಾ ಯಾಕೆ ಶೋಕಿಸುವಿ? ವಿಧಿಯು ಅದಾವ ಆಪತ್ತು ತಂದೊಡ್ಡಿ ನಿರ್ಧಯದ ಸುತ್ತಿಗೆಯಿಂದ ಹೊಡೆದು ಹೃದಯ ಗಾಯಗೊಳಿಸಿದೆ.

**ಜೀವನ—** ಬಡಜೀವಿಗಳಿಗೆ ಸದಾ ಕಷ್ಟಕೊಡುವದೊಂದು ವಿಧಿಯ ನಿಯಮವೋ? ಅಸಹಾಯ ಜೀವಿಗಳಿಗೆ ಕಷ್ಟಕೊಟ್ಟು ನಿತ್ಯ ಕಣ್ಣೀರು ಕರೆಯಿಸಲು ಹಚ್ಚುವದೊಂದು ನಿಸರ್ಗದ ನಿಷ್ಠುರ ಗೂಣವೋ? ಮಾನವರಲ್ಲಿರಬೇಕಾದ ಸಹಕಾರ ಸಹಾನುಭೂತಿಗಳ ಕೊರತೆಯೋ? ಅದಾವುದು ತಿಳಿಯದಾಗಿದೆ. ನೀಲಾ! ಈ ಮನೆಯ ಋಣವು ಇಂದಿಗೆ ತೀರಿತು.

**ನೀಲಾ—** ಅಣ್ಣಾ! ಈ ಮನೆಯ ಋಣವು ತೀರುವ ಕಾರಣ.

**ಜೀವನ—** ಹೊಲೆಯ ಕುಲದಲ್ಲಿ ಹುಟ್ಟಿದ ಕಾರಣದಿಂದ ಅನ್ನ ದಾತರಾದ ದೇವದಾಸರ ಮನೆಯಂಗಳದಲ್ಲಿ ಇರಲು ನಮಗೆ ಹಕ್ಕು ಇಲ್ಲಾ ತಂಗಿ.

**ನೀಲಾ—** ಅಣ್ಣಾ! ಎದೆಗುಂದದಿರು. ದಲಿತರ ಮಿದುವಾದ ಎದೆಯಮೇಲೆ ನಿರ್ದಯದ ಹಾಸುಬಂಡೆ ಹೇರುವದು ಸಿರಿವಂತರ ಸ್ವಭಾವ. ಬದುಕಿನ ಬಲ ಬೆಳೆದರೆ ಮೇಲುಕುಲದ ಶೀಲಕ್ಕೆ ಕಲಂಕ ಬರುವದೆಂಬುವದು ಸ್ವಾರ್ಥಿ ಸಮಾಜದ ಮತ. ಇದಕಿನಿತು ನಿರಾಶೆಯ ನುಡಿಬೇಡ.

**ಜೀವನ**– ತಂಗಿ! ಜೀವನದ ಸುಖಶಾಂತಿಗಾಗಿ ಆಶೆ. ನನ್ನ ಹೃದಯ ಕುಂಡದಲ್ಲಿ ಕಷ್ಟ-ತಾಪತ್ರಯ ತುಂಬಿ ತುಳುಕುವಾಗ ಬದುಕುವ ಆಶೆ ಅಳಿದಿದೆ. ನಿರಾಶೆ ತಲೆಯೆತ್ತಿ ನಿಂತಿದೆ. ಜಗತ್ತೇ ನನ್ನ ಪಾಲಿಗೆ ಇಲ್ಲದಾಗಿದೆ. ಸ್ವಾರ್ಥಿಗಳು ಕಪಟ ಕಾರಸ್ಥಾನದಿಂದ ದೀನದಲಿತರ ಕೊಲೆ ನಡೆಯಿಸಿದಾಗ ನಮಗೆಲ್ಲಿದೆ ಆಶೆ. ಸಾವು ಕೈಮಾಡಿ ಕರೆವಲ್ಲಿಗೆ ಹೋಗುವಾ ನಡೆ.

**ನೀಲಾ**— ಕುಲದಿಂದ ಕೀಳಾದರೂ ನೀತಿಯಿಂದ ಮೇಲಾಗಿ ದೇವದೇವನ ಪ್ರೀತಿಗೆ ಪಾತ್ರರಾಗಿ ಭೂಮಿಯ ಋಣಮುಟ್ಟಿಸಿ ಈ ದೇಹ ನೀಗಿದರೆ ಆ ದೇವನು ಮೆಚ್ಚುವನು ಅಣ್ಣಾ!

**ಜೀವನ**— ತಂಗಿ! ನಾನು ನನ್ನದು ಇಲ್ಲ! ನಮಗಾಗಿ ಸಮಾಜಕ್ಕೆ ಕರುಣೆಯಿಲ್ಲ. ನಮ್ಮ ಪಾಲಿಗೆ ದೇವರು ಇಲ್ಲ.

**ಇಂದುಧರ**— (ಪ್ರ) ವಿಶ್ವದ ಚೈತನ್ಯಮಯ ವಸ್ತುಗಳಲ್ಲಿ ದೇವರಿದ್ದಾನೆ. ಪ್ರಪಂಚದ ಸರ್ವ ಭೂತಗಳ ಚಾಲಕನು ಪಾಲಕನು ಆ ದೇವದೇವನು. ದೇವರು ಅಗಮ್ಯನೂ ಅಗೋಚರನಾಗಿದ್ದರೂ ಜ್ಞಾನದೃಷ್ಟಿಗೆ ಗೋಚರನಾಗುವನು. ನಿನ್ನಲ್ಲಿ ಬುದ್ಧಿಶಕ್ತಿ ಜ್ಞಾನಶಕ್ತಿಗಳಿರಲು ದೇವರಿಲ್ಲೆಂಬ ಸೊಲ್ಲೇಕೆ?

**ಜೀವನ**— ದೇವನಿರುವನೆಂಬ ಬಲವಾದ ನಂಬುಗೆಯಿದ್ದರೂ ಮರಣಾಂತ ವೇದನೆಯಿಂದ ಎನ್ನೆದೆಯಾಗಿದೆ ಕಲ್ಲು! ಕಲ್ಲಾದ ಎದೆಗೆ ಬಡಿಯುತಿದೆ ಸಾವಿನ ಕಲ್ಪನೆಯ ಬಿಲ್ಲು!! ದುಃಖದುರಿಯಲ್ಲಿ ಬಿದ್ದು ಬಳಲುವ ಈ ಪತೀತನ ಪದಪಲ್ಲವಿಯ ಸೊಲ್ಲು! ಇಂದುಧರಾ ತಂದೆ-ತಾಯಿ ಬಂಧು-ಬಳಗವಿಲ್ಲದ ಕಡುಪಾಪಿನಾ. ಹೊಟ್ಟೆಗೆ ಅನ್ನವನ್ನು ಕೊಟ್ಟು ಸಾಕಿ ಸಲುಹಿದ ಅನ್ನದಾತರ ಆಶ್ರಯವಿಲ್ಲದ ನಿರಾಶ್ರಿತನಾ.

**ದೇವದಾಸ**— (ಪ್ರ) ಮತ್ತೆನ್ನ ಮನೆಯ ಹಿತ್ತಲಲ್ಲಿ ಅಸ್ಪೃಶ್ಯಾ.

**ಇಂದುಧರ**— ತಾತಾ! ಅಸ್ಪೃಶ್ಯನಾರು?

**ಜೀವನ**— ನಾನು ಅಸ್ಪೃಶ್ಯ! ಅಂತ್ಯಜ!! ಅಚುತ!

**ದೇವದಾಸ**— ಯಾರಿವಳು?

**ಜೀವನ**— ಪಂಚಮ ಪುತ್ರಿ! ಅಚುತಕನ್ಯಾ!!

**ನೀಲಾ**— ಅಣ್ಣಾ! (ಜೀವನನ ಅಪ್ಪಿಕೊಳ್ಳುವಳು)

**ಜೀವನ**— ತಂಗಿ! ಅಸ್ಪೃಶ್ಯರ ಬಾಳಿನಮೇಲೆ ಧರ್ಮದ ದುರಾಭಿಮಾನದ ದಬ್ಬಾಳಿಕೆ ನಡೆದಿದೆ ಅಂಜದಿರು.

**ನೀಲಾ**— ಅಣ್ಣಾ! ಇದಾವ ನಿನ್ನ ಭೀಕರನೋಟ!

**ಜೀವನ**— ಭೀಕರ ನೋಟವಲ್ಲ ನೀಲಾ! ಜಾತಿವಿಕಾರದ ಹರಿದಾಟ! ಸಾವಿನ ದವಡೆಯಲ್ಲಿ ಸಿಕ್ಕ ದೀನರ ಗೋಳಾಟ! ಸಿರಿವಂತರ ಸರಸಾಟ! ಸ್ವಾರ್ಥಿ ಸಮಾಜದ ಎಳೆದಾಟ! ಪಾವನರು ಪತೀತರನ್ನು ಪೀಡಿಸುವ ಪರಿಪಾಠ! ಅಂತ್ಯಜರ ಕಂಬನಿಗಳ ತಾಕಲಾಟ! ಅಂತ್ಯಜರ ಅವಸಾನದ ನೋಟ! ಇದುವೇ ಜಗದಾಟ.

**ದೇವದಾಸ**— ಜೀವನಾ ಹೊರಡು ಇಲ್ಲಿಂದ ಮಾಡದಿರು ವ್ಯರ್ಥ ಹೋರಾಟ. ಮಲಗಲು ಮನೆಕಾಣದ ಹೊಲತಿ ನನ್ನ ಮಗನಮೇಲೆ ನಿನ್ನ ಹೃದಯದ ಹೊಲಸು ಹುಡಿ ಹಾಕಿ ಹಾಲಿನಂತಹ ಕುಲವನ್ನು ಹಾಳು ಮಾಡಲು ಹೊರಟ ಹೊಯ್ಮಾಲಿ ಹೊಲತಿ.

**ಇಂದುಧರ**— ಯಾರು ಹೊಲತಿ.

**ಜೀವನ**— ಹೊಲೆಯಕುಲದಲ್ಲಿ ಹುಟ್ಟಿದ ನೀಲಾ ಹೊಲತಿಯಲ್ಲದೆ ಕುಲವತಿಯಲ್ಲ ಇಂದುಧರಾ!

**ಇಂದುಧರ**— ತಾತಾ! ಈ ಪತೀತರ ಪರಿಶುದ್ಧವಾದ ಹೃದಯದಲ್ಲಿ ಸದ್ಗುಣಗಳ ಶುಭಛಾಯೆಯಿದೆ. ಸೌಜನ್ಯದ ತೇಜಸ್ಸಿದೆ. ಸತ್ಯದ ಕಾಂತಿಯಿದೆ. ಹೊಲೆಯರೆಂದು ಹಳಿದು ಅವರ ಮನ ನೋಯಿಸುವದು ನೀತಿಸಮ್ಮತವಲ್ಲ.

**ದೇವದಾಸ**— ಇಂದುಧರ ವಿಕಾರವಶನಾಗಿ ಮಾತಾಡಿ ನನ್ನ ಮನ ನೋಯಿಸದಿರು. ಈ ಪತೀತರಮೇಲಿನ ನಿನ್ನ ಪ್ರೇಮ ನಮ್ಮ ಉಚ್ಚ ಕುಲಕ್ಕೆ ಕಲಂಕ ಹಚ್ಚುವದು ಸಮಾಜಕ್ಕೆ ವಿರೋಧವಾದುದು.

**ಇಂದುಧರ**— ಈ ಅಸ್ಪೃಶ್ಯರು ಮಾನವರಲ್ಲವೇ? ಮಾನವರು ಮಾನವರಮೇಲೆ ಪ್ರೇಮ ಮಾಡಿದರೆ ಸಮಾಜಕ್ಕೆ ವಿರೋಧವೆ? ಕುಲಕ್ಕೆ

ಕಲಂಕವೇ? ಸಮಾಜ! ಆದಾವ ಸಮಾಜ! ಸಮಾಜದ ಅರ್ಥವೇನು? ತಮ್ಮ ಸ್ವಾರ್ಥಕ್ಕಾಗಿ ಶಾಸ್ತ್ರ ನಿರ್ಮಿಸಿದ ಕಳ್ಳಹಿರಿಯರ ಸಮೂಹದ ಸಮಾಜ! ಇಂತಹ ಸಮಾಜಕ್ಕೆ ವಿರೋಧವಾಗುವದೇ ನನ್ನ ಸಹಜ ಸ್ವಭಾವ.

**ದೇವದಾಸ**— ಇಂದುಧರಾ! ಈ ಹೊಲೆಯರಮೇಲಿನ ಪ್ರೇಮದ ಮಾತು ವಿವೇಕದ ಹೆಬ್ಬಾಗಿಲದ ಹದ್ದನ್ನು ಮೀರುವದು. ತುಪ್ಪದ ಸವಿಗೆ ಅಲುಗನ್ನು ನೆಕ್ಕಿದರೆ ಆ ಅಲುಗಿನ ಮನೆಯು ನಾಲಿಗೆ ಕೊರೆಯುವದು.

**ಇಂದುಧರ**— ತಾತಾ! ಅಧರ್ಮದ ಅಲಗು ನೆಕ್ಕದೆ ಸುಧೆಯನ್ನು ಸವೆಯುತಿರುವೆ. ಸೌಂದರ್ಯದ ಮೇಲಿನ ಪ್ರೇಮ ದಾನವೀಯ ಪ್ರೇಮ. ಶೀಲದ ಮೇಲಿನ ಪ್ರೇಮ ಮಾನವೀಯ ಪ್ರೇಮ.

**ದೇವದಾಸ**— ಧರ್ಮ ಯಾವದು? ಅಧರ್ಮ ಯಾವದು? ತಿಳಿಯದು ನಿನ್ನ ಅಂಧಶಕ್ತಿಗೆ ಶೀಲದ ವಜ್ರದ ಹರಳುಗಳು ದೊರೆಯಲಾರವು ಶೂದ್ರ ಕುಲದ ಕೊಳೆಚೆಯಲಿ. ಸೌಂದರ್ಯದ ಬೆಣಚಿ ಕಲ್ಲುಗಳು ವಜ್ರದ ಹರಳುಗಳಾಗಿ ಕಾಣುವವು ತಾರುಣ್ಯದ ದೂಷಿತ ದೃಷ್ಟಿಯಲಿ. ಜಾತಿಮತವ ಮರೆತು ಮಮತೆ ಮಾಡದಿರು ಈ ಕೀಳು ಕುಲಜರನು.

**ಇಂದುಧರ**— ಮಾತುಮಾತಿಗೆ ಜಾತಿ ಮತವ ಮುಂದೆ ತರದಿರು ತಾತಾ!

ನಡೆಯುವದೊಂದೇ ಭೂಮಿ! ಕುಡಿಯುವದೊಂದೇ ನೀರು!
ಸುಡುವಗ್ನಿಯೊಂದೇ ಇರುತಿರಲು ಕುಲಗೋತ್ರ ನಡುವೆ ಎತ್ತಣದು
ಸರ್ವಜ್ಞ.

ಎಂದು ಸರ್ವಜ್ಞ ಕವಿಗಳು ಜಾತಿಮತವಾದಿಗಳಿಗೆ ಸಾರಿ ಸಾರಿ ಹೇಳಿದ್ದಾರೆ

**ಜೀವನ**— ತಂದೆ! ಭಾರತೀಯರೆಲ್ಲರು ಒಂದು. ಅವರಿಗೆ ಕುಲವೊಂದಲ್ಲದೆ ನೂರಿನ್ನೂರು ಜಾತಿಗಳೆಲ್ಲಿಂದ ಬಂದವು? ಭಾರತೀಯರೆಲ್ಲರೂ ನಮ್ಮ ಬಳಗವೆಂದೂ ನಮ್ಮ ಸಂಪತ್ತಿನ ಸಮಭಾಗಿಗಳೆಂದು ಭಾವಿಸದಿದ್ದರೆ ರಾಷ್ಟ್ರವಾಗುವದು ಘಾಶ! ಜಾತಿ ಜಾತಿ ಎಂದು ಮಾನವರನ್ನು ವಿಂಗಡಿಸಿ

ವರೆ ಆಗುವದು ಜನತೆಯ ನಾಶ ಇಂದಿಲ್ಲ ನಾಳೆ ಈ ಕುಂದು ಕಳೆಯುವದು ಭಾರತ ದೇಶ!

**ದೇವದಾಸ**— ಮಾಡದಿರು ಉಪದೇಶ ಅಸ್ಪೃಶ್ಯಾ! ನಿನ್ನ ತಂಗಿಯನ್ನು ಕಟ್ಟಿಕೊಂಡು ಹೊರಡು ಇಂದುಧರಾ! ಮಾತಿಗೆ ಮಾರುತ್ತರ ಕೊಡದೆ ನಡೆ ಇಲ್ಲಿಂದ. (ಇಂದುಧರನು ಹೋಗುವನು)

**ಸುರೇಶ**— (ಪ್ರವೇಶ) ದೇವದಾಸರೇ! ಕಲಿತ ಹೆಮ್ಮೆಯಿಂದ ಕುಲದ ಕರ್ತವ್ಯ ಬಿಟ್ಟು ಕುಲವೊಂದು ಎಂದು ಛಲದಿ ನುಡಿಯುವ ಜೀವನನ ಸೊಕ್ಕು ಉಕ್ಕೇರುತಿದೆ. ಸೌಂದರ್ಯದ ಗರ್ವದಿಂದ ಗುರುಗುಡುತಿಹಳು ನೀಲಾ! ಇವರ ಕೀಳು ಕೃತಿಗಳೇ ಹೊಲೆಯರೆಂದು ಕೈಮಾಡಿ ಕರೆಯುತಿಹವು.

**ಜೀವನ**— ಹೊಲೆಯರಾರು?

ಕೊಲುವವನೆ ಮಾದಿಗ ಹೊಲಸು ತಿಂಬುವವನೇ ಹೊಲೆಯ
ಕುಲವೇನೋ ಆವಂದಿರ ಕುಲವೇನೋ ಸಕಲ ಜೀವಾತ್ಮರಿಗೆ
ಲೇಸವೇ ಬಯಸುವ ನಮ್ಮ ಕೂಡಲಸಂಗನಾ ಶರಣರೇ ಕುಲಜರು

ಎಂದು ಹೇಳಿದ ಮಹಾತ್ಮಾ ಬಸವಣ್ಣನವರ ಅಮೃತವಾಣಿ ನಿಮ್ಮೆದೆಯಲಿ ಮಿಡಿಯಲಿ.

**ಸುರೇಶ**— ಕಾಗೆ ತಾನೆಷ್ಟು ಕೂಗಿದರೂ ಕೋಗಿಲೆಯಾಗಬಲ್ಲುದೇ ಕತ್ತೆಗೆ ಲಿಂಗಮುದ್ರೆಯನೊತ್ತಿದರೆ ಬಸವನಾಗಬಹುದೇ ಬೆಣಚಿ ಹರಳುಗಳು ತಾನೆಷ್ಟು ಹೊಳೆದರೂ ವಜ್ರದ ಹರಳುಗಳಿಗೆ ಸರಿಯಾಗಬಲ್ಲುದೇ ನೀನೆಷ್ಟು ಕಲಿತರೂ ಉಚ್ಚ ಕುಲಜರಿಗೆ ಸರಿಯಾಗಬಹುದೇ? ದೇವದಾಸರೇ ಈ ಮದಾಂಧನಿಗೆ ನೀವು ಕೊಟ್ಟ ಅನ್ನದಋಣ ತೀರಿಸಿ ಹೋಗಲು ಹೇಳಿರಿ.

**ದೇವದಾಸ**— ಜೀವನಾ! ನಿನಗಾಗಿ ಕೊಟ್ಟ ಒಂದು ಸಾವಿರ ರೂಪಾಯಿ ಸಾಲ ತೀರಿಸಿ ಹೊರಡು ಇಲ್ಲಿಂದ.

**ಸುರೇಶ**— ನಿನ್ನಲ್ಲಿರದಿದ್ದರೆ ದುಡಿದಾದರೂ ಮುಟ್ಟಿಸು.

**ಜೀವನ**— ಯಾರಲ್ಲಿ?

**ಸುರೇಶ**— ನನ್ನಲ್ಲಿ.

**ದೇವದಾಸ**— ಸುರೇಶ ಸಾವುಕಾರರಲ್ಲಿ.

**ನೀಲಾ**— ಅನ್ನವನು ಕೊಟ್ಟು ಸಾಕಿ ಸಲುಹಿದ ತಂದೆ ಅದಾವ ತಪ್ಪಿನಿಂದ ಹೊರದೂಡುವಿ ನಮ್ಮನ್ನು ಇಂದೆ. ನಿಮ್ಮ ಮನೆಯಂಗಳ ಕಸ ಗೂಡಿಸಿ ಜೀವನ ಸಾಗಿಸುವೆವು ನಿಮಗಾವ ತೊಂದರೆಯಿಲ್ಲದೆ. ನಾವು ನಿಮ್ಮ ಮಕ್ಕಳು ಮನೆಯ ಬಿಟ್ಟು ಹೊರಗಟ್ಟಿ ಸಾಲದ ಭಾರ ಹೇರಿದರೆ ಕೊಡುವದಾದರೂ ಹೇಗೆ ತಂದೆ?

**ದೇವದಾಸ**— ಎಚ್ಚರವಿಲ್ಲದೆ ಉಚ್ಚರಿಸದಿರು ನೀಲಾ! ಅಸ್ಪೃಶ್ಯ ರಾದ ನಿಮ್ಮನ್ನು ಇರಲಾಶ್ರಯ ಕೊಟ್ಟು ಮಿತಿಮೀರಿ ನಂಬಿಕೆ ವಿಶ್ವಾಸ ವಿಟ್ಟು ನನ್ನ ಮನೆತನವ ಹಾಳುಮಾಡಿಕೊಂಡೆ ನಾ ತಿಳಿಯಲಾರದೆ ನಿನ್ನ ನಿಜಗುಟ್ಟು. ಈಗಲೇ ಮನೆಬಿಟ್ಟು ಹೊರಬೀಳು ನೀಲಾ.

**ಸುರೇಶ**— ಹೃದಯದ ಹಂಬಲವ ಬಚ್ಚಿಟ್ಟು ಮನದ ಔದಾರ್ಯ ತೋರಿಸಿ ಮಾತಿನ ಮಾಧುರ್ಯ ಸುರಿಸಿ ಹೊಯ್ಮಾಲಿಯರ ಬಣ್ಣದ ಮಾತು ಬೆರಿಸಿ ಉಚ್ಚಕುಲಜರೊಡನೆ ಸರಸವಾಡಲು ಹೊಂಚು ಹಾಕಿದ ಹೊಯ್ಮಾಲಿ ಬಡಿವಾರದ ಮಾತು ಮಾತಾಡದಿರು.

**ನೀಲಾ**— ಹೊಯ್ಮಾಲಿಯ ಮಗಳಲ್ಲ ಹೊಯ್ಮಾಲಿತನ ಹೊಳೆದಿಲ್ಲ ಹೇಸಿ ಹಂಬಲ ಹೃದಯದಲಿಲ್ಲ ಬಡಿವಾರದ ಬಣ್ಣದ ಮಾತಿಲ್ಲ ನಿಮಗಿನಿತು ದಯವಿಲ್ಲ. ಅಣ್ಣಾ ನಡೆ ಹೋಗುವಾ.

**ಜೀವನ**— ಸಾವುಕಾರರೇ ಜಾತಿಯ ಬಡಿವಾರದ ಬಂಡುಕಾಲವಿಲ್ಲ. ಭಂಡವಲಶಾಹಿಗೆ ಉಳಿಗಾಲವಿಲ್ಲ. ಬಡ ಹೆಣ್ಣುಮಕ್ಕಳ ಹೃದಯದಲ್ಲಿ ಹೇಸಿ ಹಂಬಲವಿಲ್ಲ. ಕೀಳು ಕುಲದ ಕುವರಿಯೆಂದು ಬಾಯಿಗೆಬಂದಂತೆ ಮಾತಾಡಿದರೆ ತಳಮಳವಾಗುತಿದೆ ಈ ಬಡವನ ಕರುಳು.

**ಸುರೇಶ**— ಜೀವನಾ! ಸಾಲದಭಾರಕ್ಕೆ ಭಯಪಟ್ಟು ಬಡಬಡಿಸ

ದಿರು. ಈ ನೀಲೆಯನ್ನು ದೇವದಾಸಿಯನ್ನು ಮಾಡು. ಅದು ನಿಮ್ಮ ಕುಲದ ಕರ್ತವ್ಯ. ಕಲಿತ ಕೈಗಳು ಕೆಸರ ಬಳಿಯಲಾರವು.

**ಜೀವನ**— ಹಣದಾಶೆಗಾಗಿ ಸಹೋದರಿಯನ್ನು ದೇವದಾಸಿಯೆಂಬ ದುರ್ಗಂಧಮಯ ಕುಂಡದಲ್ಲಿ ಕೆಡಹುವ ಕೀಳುಮನದವನು ನಾನಲ್ಲ. ಕೀಳು ವಿಚಾರ ನನ್ನಲ್ಲಿಲ್ಲ. ಬಡವನಾದ ನನಗೆ ನುಡಿಯಲು ಬಾಯಿಲ್ಲ.

**ನೀಲಾ**— ಸಾಹುಕಾರರೇ! ಮಾತು ಮಾತನೆ ಆಡಿ, ಮಾತಿನಲ್ಲಿ ಹಾದರವ ಮರೆಮಾಡಿ ತಿರುಗುವ ಹುಡುಗಿ ನಾನಲ್ಲ ಹಣದಾಶೆಗಾಗಿ ದಾನವರಿಗೆ ದೇಹ ಮಾರುವ ಹೇಸಿ ಹೆಂಗಸು ನಾನಲ್ಲ. ಬಡವಿಯಾದರೂ ಭರತಭೂಮಿಯ ಗರತಿನಾ.

**ದೇವದಾಸ**— ಜೀವನಾ! ನಾಳೆ ಸಂಜೆಯೊಳಗಾಗಿ ಸಾಲತೀರಿಸಿ ಹೊರಡು. ಇಲ್ಲವಾದರೆ.... (ಸುರೇಶ ದೇವದಾಸರು ಹೋಗುವರು)

**ನೀಲಾ**— **ಪದ**

ಕುಲಜರು ಕೊಡುತಿಹರ್ಕೈ ಬಹುಪರಿಯಾ। ಕಷ್ಟವನು
ಸಹಿಸಲಾರೆ। ದೇವಾ ||ಪ||
ಅಚುತ ಕುಲದಲಿ ಜನಿಸಿದ ಕಾರಣಾ। ದೀನದಯಾಳೋ ಕಾಯೋ ||೧||



# ೪ ನೇ ಪ್ರವೇಶ

ಸ್ಥಳ;- ದೇವದಾಸರ ಮನೆ.

**ದಯಾವತಿ**— ಮಗು! ನಗುಮೊಗದಿಂದ ಬರುವವನು ಇಂದೇಕೆ ಬಾಡಿರುವದು ನಿನ್ನ ಮೊಗವು.

**ಇಂದುಧರ**— ಮಾನವರಲ್ಲಿ ಮೇಲು-ಕೀಳು ಎಂಬ ಸಮಾಜದ ಗೊಂದಲವು ನನ್ನ ಹೃದಯ ಹಣ್ಣುಮಾಡಿದೆ ತಾಯಿ.

**ದಯಾವತಿ**— ಜಾತಿಯ ಝಂಝಾವಾತದಲ್ಲಿ ಸಿಗದಿರು. ಜಾತಿ-ಮತಗಳು ಮಾನವನ ಉತ್ಕರ್ಷಕ್ಕಾಗಿ ನಿರ್ಮಿಸಲ್ಪಟ್ಟಿವೆ. ಅವರವರು ತಮ್ಮ ಧರ್ಮದಮೇಲೆ ಭಕ್ತಿ ವಿಶ್ವಾಸವಿಡುವದರಲ್ಲಿಯೇ ಸುಖವಿದೆ. ನಿನಗೆ ಧರ್ಮದ ಅಭಿಮಾನವಿಲ್ಲವೇ?

**ಇಂದುಧರ**— ಜಾತಿಯ ಅಭಿಮಾನ ಜನತೆಯಲ್ಲಿ ಹೆಚ್ಚಾಗಿ ದ್ವೇಷಾಸೂಯೆಗಳ ಚೀತ್ಕಾರ ಕೇಳಬರುತ್ತದೆ ಭಾರತದ ಮೂಲೆ ಮೂಲೆಗಳಲ್ಲಿ. ಮುಖಂಡರ ಕೆಚ್ಚೆದೆಯು ಬೆಚ್ಚಿಬೀಳುತಿದೆ. ಮತ್ತಿನ್ನ ಸರ್ವಾಂಗ ಕೊರೆಯುತಿದೆ. ಒಬ್ಬರ ಬದುಕಿನ ಬಲವನ್ನು ನಾಶಮಾಡಿ ತಮ್ಮ ಬದುಕಿನ ಬಲ ಬೆಳೆಯಿಸಿಕೊಳ್ಳಬೇಕೆಂಬುವ ಧರ್ಮದ ದುರಾಭಿಮಾನವಿಲ್ಲ ತಾಯಿ. ಮಾನವ ಧರ್ಮದ ಅಭಿಮಾನವಿದೆ. ನನ್ನಾತ್ಮಕ್ಕೆ ನಿನ್ನಾತ್ಮದ ಸೆಳೆಮಿಂಚು ನೀಡಿ ಶ ರೀ ರ ಕ್ಕೆ ಮೊಲೆಹಾಲು ಕುಡಿಸಿ ಬೆಳಸಿದ ತಾಯಿ. ಬುದ್ಧಿಗೂ ಮಾನವ ಧಮ್ಮದ ಹಾಲುಣಿಸಿ ಎದೆಯ ಹರಕೆಯ ವಜ್ರಕವಚ ತೊಡಿಸಿ ಭಾರತದಲ್ಲಿ ಬಾಳುವಂತೆಮಾಡು ತಾಯಿ.

**ದಯಾವತಿ**— ಮಗು! ವಿದ್ಯಾಸಂಪನ್ನನಾದ ನಿನಗೆ ನಾನು ಹೇಳುವದಾದರೂ ಏನಿದೆ. ಕುಲಶೀಲಗಳನ್ನು ಕಳೆದುಕೊಂಡು ವಿಷಮ

ಪರಿಸ್ಥಿತಿಯ ಪಾಶಕ್ಕೆ ಸಿಲುಕಿ ಕಷ್ಟಮಯ ಕಾರ್ಮೋಡಗಳಿಗೆ ತುತ್ತಾಗ ಬೇಡಪ್ಪ. ನಿನ್ನ ಹಡೆದವರು ನಿನ್ನ ವಿಷಯವಾಗಿ ಹಗಲಿರುಳು ಕಾಯುವನ್ನು ಕೊರಗಿಸುತಿರುವರು.

**ಇಂದುಧರ**— ಕಾಯುವನ್ನು ಕೊರಗಿಸಲು ಕಾರಣವೇನವ್ಮಾ ನಾನಾವ ಅಪರಾಧ ಮಾಡಿದ್ದೇನೆ.

**ದೇವದಾಸ**— (ಪ್ರವೇಶ) ಉಚ್ಚಕುಲದ ರೀತಿ-ನೀತಿಯ ಮರೆತು ಅಸ್ಪೃಶ್ಯರಲ್ಲಿ ಬೆರೆತು ಮನಬಂದಂತೆ ಮಾತಾಡುವ ನಿನ್ನ ಆಚರಣೆಯು ಅಪರಾಧ! ಇಂದುಧರಾ! ನಿನ್ನಮೇಲಿನ ನನ್ನ ಪ್ರೇಮ ನಿನ್ನ ನಡತೆಯಿಂದ ಮರೆಯಾಗುತಿಹುದು.

**ಇಂದುಧರ**— ತಾತಾ! ದೇಹವೆಂಬ ದೇಗುಲದಿಂದ ಆತ್ಮಬಿಟ್ಟು ಹೋದೊಡನೆ ಈ ದೇಹಕ್ಕೆ ಬರುವದು ಹೆಣವೆಂದು ನಾಮಕರಣ. ಆಗ ಪುತ್ರಪ್ರೇಮ ಕರಗಿ ನೀರಾಗಿ ಕಣ್ಣಿನಿಂದ ಹೊರಚಲ್ಲಿ ಮರುದಿನ ಕೂಳಿಗೆ ಕೈಚಾಚುವ ಈ ಪುತ್ರಪ್ರೇಮ ಮಿಥ್ಯ. ಪ್ರತಿಯೊಂದು ಮಾನವ ಜೀವಿಗಳ ಮೇಲೆ ಪ್ರೇಮಮಾಡುವದು ಸತ್ಯ. ಸತ್ಯಪ್ರೇಮದಿಂದ ಬಾಳಿಬದುಕಿ ಮಾನವ ಪ್ರಪಂಚದ ಬದುಕಿನಬಲ ಬೆಳೆಸುವದೇ ಹಿಂದು ಧರ್ಮದ ಸಂಸ್ಕೃತಿ. ಈ ಸಂಸ್ಕೃತಿಯತ್ತ ಸಾಗುವದೇ ಭಾರತಿಯರಿಗೆ ಸದ್ಗತಿ.

**ದಯಾವತಿ**— ಮಗು! ಮತ್ತೊಬ್ಬರ ಬದುಕಿನ ಬಲ ಬೆಳೆಸುವಾಗ ತನ್ನ ಕುಲಾ ಕೆಡಿಸಿಕೊಳ್ಳಲು ಹೇಳಿಲ್ಲ ಆರ್ಯಸಂಸ್ಕೃತಿ. ಮತ್ತೊಬ್ಬರಮೇಲೆ ಮಮತೆ ಮಾಡುವಾಗ ತಮ್ಮ ಮತ ಕೆಡಿಸಿಕೊಳ್ಳಲು ಹೇಳಿಲ್ಲ ಹಿಂದು ಧರ್ಮದ ಪದ್ಧತಿ ತಾ ನು ತನ್ನದನ್ನು ನಂಬಿನಡೆದರೆ ಸಿಗುವದು ಸುಖಶಾಂತಿ.

**ಇಂದುಧರ**— ಅಮ್ಮಾ! ತಾನು ತನ್ನದು ಎಂಬುವ ಸಂಕುಚಿತ ಭಾವನೆಯಲ್ಲಿದೆ ದುರ್ಗತಿ! ತಾನು ತನ್ನದೆಂಬ ವಿಶಾಲಭಾವನೆಯಲ್ಲಿದೆ ಸದ್ಗತಿ!! ಭಾರತದಲ್ಲಿ ಸ್ಪೃಶ್ಯಾಸ್ಪೃಶ್ಯವೆಂಬ ಭೇದವಳಿದು ಭಾರತಿಯ ರೆಲ್ಲರು ಒಂದು ಎಂಬ ಭಾವನೆ ಬೆಳೆದಾಗಲೇ ಸಿಗುವದು ಸ್ವತಂತ್ರಭಾರತಿ ಯರಿಗೆ ಸುಖಶಾಂತಿ.

**ದೇವದಾಸ**— ಜಾತಿ-ಭೇದವಿಲ್ಲೆಂಬ ಭ್ರಮೆ ನಿನ್ನ ಬುದ್ಧಿಗೆ ಬಡಿದುಕೊಂಡ ಭ್ರಾಂತಿ! ಜಾತಿ ಮತ-ಸಂಘಗಳು ಅತಿ ಪ್ರಾಚೀನಕಾಲದಿಂದಲೂ ರೂಢವಾಗಿದ್ದು ಅವು ಸುಳ್ಳೆಂಬ ನಿನ್ನ ಕಲ್ಪನೆಯೆ? ಧರ್ಮಾವಲಂಬಿಯಾದ ನನ್ನ ಮನೆಯಲ್ಲಿ ಧರ್ಮದ ಕೊಲೆಯೇ? ಇಂದುಧರಾ ಸಮಾಜಕ್ಕೆ ವಿರೋಧವಾಗಿ ಬದುಕುವದು ಬಲುಕಷ್ಟ. ಹೊಲೆಯರಮೇಲಿನ ನಿನ್ನ ಪ್ರೇಮ ನಮ್ಮ ಕುಲಕ್ಕೆ ಕಲಂಕ.

**ಇಂದುಧರ**— ಹೊಲೆಯರು ಮಾದಿಗರು ಕೀಳೆಂದು ಕಲ್ಪಿಸುವದೇ ಸ್ವತಂತ್ರ ಭಾರತಕ್ಕೆ ಇದೊಂದು ಕಲಂಕ! ರಾಷ್ಟ್ರದ ಐಕ್ಯತೆಗೆ ಆತಂಕ. ಪ್ರಪಂಚದ ಮಾನವರೊಡನೆ ಪ್ರೇಮದಿಂದ ಕೂಡಿ ಅವರ ಯೋಗಕ್ಷೇಮವನ್ನು ನೋಡುವದೇ ವಿಶ್ವಬಾಂಧವ್ಯ. ಇದುವೇ ಪ್ರತಿಯೊಬ್ಬ ಭಾರತಿಯನ ಕರ್ತವ್ಯ. ತಾತಾ! ಕೊಡಗಳು ಬೇರೆಯಾದರೂ ಅದರಲ್ಲಿರುವ ನೀರು ಒಂದೇ ಅಲ್ಲವೇ?

**ದೇವದಾಸ**— ನಿಜ.

**ಇಂದುಧರ**— ಅದರಂತೆ ದೇಹಗಳು ಬೇರೆ ಬೇರೆಯಾದರೂ ಅವುಗಳಲ್ಲಿರುವ ಆತ್ಮ ಒಂದೇ. ಭಾರತದಲ್ಲಿ ನೂರಿನ್ನೂರು ಕುಲಗಳಿರಲೊಲ್ಲವೇಕೆ? ಅವೆಲ್ಲವುಗಳಲ್ಲಿರುವದು ಒಂದೇ ಒಂದು ಧರ್ಮ. ಅದು ಹಿಂದುಧರ್ಮ ಋಷಿ-ಕವಿಗಳು ನಿರ್ಮಿಸಿದ ಮಹಾಸಂಪತ್ತು. ಅದನ್ನು ಹುಡಿಗೂಡಿಸಿ ಜಾತಿಯ ಭೂತವು ಮೈತುಂಬಿ ಜನತೆಯನ್ನು ಪೀಡಿಸುವದು ಮಹಾಪಾಪ. ತಾತಾ! ಜಾತಿಗಳು ಸ್ವಾರ್ಥಿಗಳು ಭಾರತದಲ್ಲಿ ಬಿತ್ತಿದ ವಿಷಬೀಜಗಳು.

**ದೇವದಾಸ**— ಮಾನವ ಜನಾಂಗದ ಇತಿಹಾಸದಲ್ಲಿ ಆದಿಗ್ರಂಥವೆಂದು ಎಲ್ಲ ಧರ್ಮಗಳ ವಿದ್ವಾಂಸರಿಂದ ಗಣಿಸಲ್ಪಟ್ಟ ಋಗ್ವೇದದಲ್ಲಿ ದೇವತೆಗಳಪ್ರಶಸ್ತಿ ಪ್ರತ್ಯೇಕವಾಗಿದೆ. ಅಂದಮೇಲೆ ಮತಗಳು ಬೇರೆ ಬೇರೆ ಎಂಬುದು ಸರ್ವಸಮ್ಮತ. ಪ್ರತಿಯೊಂದು ಧರ್ಮದ ಮಹಾಪುರುಷರು ತಮ್ಮ ತಮ್ಮ ತತ್ವಗಳನ್ನು ಪ್ರತಿಪಾದಿಸಲು ಕ್ರಾಂತಿಯನ್ನು ಮಾಡಿ ಮಡಿದಿದ್ದಾರೆ. ಧರ್ಮಗಳುಬೇರೆ ತತ್ವಗಳುಬೇರೆ ಎಂಬುದು ವೇದದಮತ. ಇಂದುಧರಾ!

ಜಾತಿ-ಮತಗಳನ್ನು ಕಡೆಗಣಿಸಿ ಮಾತಾಡದಿರು. ನೀನಾವ ಕುಲದವ ನೆಂಬುದನು ಅರಿ.

**ಇಂದುಧರ—** ನಾನಾವ ಕುಲದವನಲ್ಲ. ಆದರೆ ಎಲ್ಲಕುಲದವನು. ನಾನಾವ ಮತದವನಲ್ಲ. ಆದರೆ ಎಲ್ಲ ಮತದವನು. ಕರುಣಾಳುವಾದ ಮಹಾತ್ಮಾ ಗಾಂಧೀಜಿಯವರ ದಿವ್ಯ ಬೋಧನೆಯ ಬೆಳಕಿನಲ್ಲಿ ಬೆಳೆದವನು ನಾನು ಭಾರತೀಯನು.

**ಪದ**

ಆತ್ಮ ಯಾವ ಕುಲದವ ಜೀವ ಯಾವ ಕುಲದವ
ತತ್ವೇಂದ್ರಿಯಗಳ ಕುಲಪೇಳಿರಯ್ಯ
ಅಂತರಾತ್ಮಕೆ ಕಾಗಿನೆಲೆಯಾದಿ ಕೇಶವ
ಆತ್ಮನೊಲಿದಮೇಲೆ ಯಾತರಕುಲವಯ್ಯ.

**ದೇವದಾಸ—** ಧರ್ಮಾಂಧಾ! ಈ ಮನೆಯಲ್ಲಿರಲು ನಿನಗೆ ಸ್ಥಾನ ವಿಲ್ಲ. ನನ್ನ ಮಗನೂ ನೀನಲ್ಲ. ಹೊರಡು ನಿನ್ನ ತಿಳಿದಲ್ಲಿಗೆ. (ಇಂದುಧರ ಹೋಗುವನು)

**ದಯಾವತಿ—** ಇಂದುಧರಾ! ಬೇಡ! ಬೇಡ!! (ಹೋಗುವಳು)



## ೫ ನೇ ಪ್ರವೇಶ

(ಸ್ಥಳ:- ಶಿಲಾಕಾಂತರ ಮನೆ)

**ಕಲ್ಲುಬಾಯಿ**— ಇಂದ್ರಾ! ಚಿಂತೆಯ ಚಿನ್ಹವು ಮುಖದಲಿ ಏಕೆ ಕಾಣುತಿದೆ.

**ಇಂದ್ರಾ**— ಚಿಂತೆಯು ನಾನು ಹುಟ್ಟಿದಾಗಲೇ ಬೆನ್ನುಹತ್ತಿರುವದು. ಈ ಜೀವನದಲ್ಲಿ ಸುಖವಿಲ್ಲ.

**ಕಲ್ಲುಬಾಯಿ**— ನೀನು ಸಿರಿವಂತರ ಮಗಳು ಸುಖ-ಸಂಪತ್ತಿನ ಕೊರತೆಯಿಲ್ಲ. ಹೀಗಿದ್ದು ಬಿಸಿಯುಸಿರು ಏಕಮ್ಮಾ?

**ಇಂದ್ರಾ**— ಸಿರಿವಂತಿಕೆಯ ಸುಖವಿಲ್ಲ. ಸಂಪತ್ತಿನ ಸವಿಯಿಲ್ಲ. ಮಮತೆ ಮಾಡುವ ಮಾತಾಪಿತರಿಲ್ಲ. ಇದ್ದೊಬ್ಬ ಬಂಧು ವಿಧಿಯ ಮುಖದಲ್ಲಿ ನೂಕಲು ನಿಂತಾಗ ಬದುಕುವ ಆಶೆ ನನಗಿಲ್ಲ ತಾಯಿ.

**ಕಲ್ಲುಬಾಯಿ**— ಸಂಪತ್ತಿನ ಮೆತ್ತಗಿನ ಹಾಸಿಗೆಯಲ್ಲಿ ಕಾಲಿಡುವ ನಿನಗೆ ಮತ್ತಾವ ಆಪತ್ತು ಬಂದಿರುವದು ಸಾಕಿಸಲುಹಿದ ನಿನ್ನ ಬಂಧುವಿನಿಂದ.

**ಇಂದ್ರಾ**— ಮಾನವರ ಮನುಷ್ಯತ್ವವನ್ನು ಮಣ್ಣುಗೂಡಿಸುವ ಸಂಪತ್ತು! ಬಡವರೆದೆಯಮೇಲೆ ನಿರ್ದಯದ ಸುತ್ತಿಗೆಯಿಂದ ಬಡಿದು ಕಣ್ಣೀರು ಕರೆಯಿಸುವ ಸಂಪತ್ತು!! ಸಂಪತ್ತಿನ ಮಾತೆತ್ತಿದರೆ ಮೈ ಉರಿಯುವದು ತಾಯಿ! ನಮ್ಮೆಲ್ಲ ಸಂಪತ್ತು ಶೆರೆಯ ಸಾಗರ ಸೇರಿದೆ. ಇನ್ನುಳಿದ ಸಂಪತ್ತು ಮರೆಯಲ್ಲಿ ಹಾದರಮಾಡಿ ಗರತಿಯ ಸೋಗುಹಾಕಿದ ಹಗರಣಿಯರ ಮನೆ ಸೇರಿದೆ. ಜೀವದ ಹೆಣದ ಕೊರಳಿಗೆ ನನ್ನನ್ನು ಕಟ್ಟಿ ನಮ್ಮ ಮನೆಗೆ ಬರಲು ಹವಣಿಸುತ್ತಿದೆ ಸಂಪತ್ತು! ಸಂಪತ್ತಿನ ಮಾತೆತ್ತ ಬೇಡ ತಾಯಿ.

**ಕಲ್ಲುಬಾಯಿ**— ನೀನು ಹೇಳುವ ಮಾತಿನ ಅರ್ಥವೇ ಆಗಲಿಲ್ಲ. ತಿಳಿಯುವಹಾಗೆ ಹೇಳಮ್ಮಾ.

**ಇಂದ್ರಾ**— ಹಣದಾಶೆಗಾಗಿ ಜೀವದ ಹೆಣದಂತಿರುವ ಧನವತ್ತರಿಗೆ ಬಲತ್ಕಾರದಿಂದ ನನ್ನನ್ನು ಕೊಡುವ ನಿರ್ಧಾರ.

**ಕಲ್ಲುಬಾಯಿ**— ಹೆಂಗಸರ ಬುದ್ಧಿ ಮೊಳಕಾಲ ಕೆಳಗೆಂದು ಕೂಗುವದು ಪುರುಷ ಸಮಾಜ. ಹಣದಾಶೆಗಾಗಿ ತಮ್ಮ ಹೆಣ್ಣುಮಕ್ಕಳನ್ನು ಜೀವದ ಹೆಣಕ್ಕೆ ಕೊಟ್ಟು ದುಃಖಕ್ಕೆ ದೂಡುವ ಪುರುಷಕುಲಕ್ಕೆಲ್ಲಿದೆ ಬುದ್ಧಿ ನಾಕಾಣೆ. ಹೆಣ್ಣೆಂದರೆ ಕೈಗೊಂಬೆಗಳೆಂದು ತಿಳಿದ ದುರ್ಮನದ ಸ್ವಾರ್ಥಿಗಳಿಗೆ ಬುದ್ಧಿಗಲಿಸಲೇಬೇಕು ಸ್ತ್ರೀಯರಾದ ನಾವಿಂದು. ಹಸುಗೂಸಾದ ನಿನ್ನನ್ನು ಮುದಿಹದ್ದಿಗೆ ಕೊಡುವ ಆವನ ವಿಚಾರಕ್ಕೆ ಬೆಂಕಿ ಹಚ್ಚು! ತಂಗಿ ನಿನಗೊಪ್ಪಿದವರನ್ನು ಮದುವೆಯಾಗುವ ನಿರ್ಧಾರ ನೀನುಮಾಡು. ನನ್ನ ಶಕ್ತಿಮೀರಿ ಸಹಾಯ ಮಾಡುವೆನು.

**ಇಂದ್ರಾ**— ನನಗೊಪ್ಪಿದವರನ್ನುಲಗ್ನವಾಗಲು ಹಿರಿಯರ ಒಪ್ಪಿಗೆ ಬೇಕಲ್ಲ ತಾಯಿ ಗುರುಹಿರಿಯರ ಮಾತು ಮೀರಿ ಸಮಾಜಕ್ಕೆ ವಿರೋಧವಾಗಿ ವಿವಾಹವಾಗುವದು ಸ್ತ್ರೀಯರಾದ ನಮಗೆ ಹೇಗೆ ಸಾಧ್ಯ?

**ಕಲ್ಲುಬಾಯಿ**— ತಮ್ಮ ಹೆಣ್ಣುಮಕ್ಕಳನು ದುಃಖಕೆ ದೂಡಿ ತಮ್ಮ ಸುಖ ಬಯಸುವ ಗುರುಹಿರಿಯರ ಒಪ್ಪಿಗೆ ಬೇಡ ಕುಲಗೋತ್ರವೆನ್ನುತ್ತ ಪ್ರೇಮವಿವಾಹಕ್ಕೆ ತಡೆ ಮಾಡುವ ಸ್ವಾರ್ಥಿ ಸಮಾಜಕ್ಕೆ ವಿರೋಧವಾದರೆ ಯಾವ ಭಯವು ಇಲ್ಲ. ತಂಗಿ! ಪರಿಶುದ್ಧ ಮನಸ್ಸಿನಿಂದ ಆ ದೇವದೇವನ ಒಪ್ಪಿಗೆ ತೆಗೆದುಕೊಳ್ಳುವದೇ ಸ್ತ್ರೀಧರ್ಮ. ಅದುವೇ ಗರತಿ ಧರ್ಮ.

**ಇಂದ್ರಾ**— ಜಾತಿಯ ಬಂಧನದ ಭಯವು ನನ್ನಮನದಲ್ಲಿ ಬಂದರೆ ದೇಹವೇ ನಡಗುವದು.

**ಕಲ್ಲುಬಾಯಿ**— ಜಾತಿ ಜಗಧನೀತಿ ಕೆಡಿಸಿದೆ. ಪ್ರೇಮಕ್ಕೆ ವಿರೋಧವಾಗಿದೆ. ಜಾತಿಯ ಹುಚ್ಚು ಹಿಡಿದ ಹಿರಿಯರಿಗೆ ನೀತಿ ಪಾಠ ಹೇಳಲು

ಸ್ತ್ರೀಯರಾದ ನಾವು ಮೊದಲು ಮುಂದಾಗಬೇಕು. ಜಾತಿ ಬಂಧನ ಹರಿಯಲು ಒಂದಾಗಬೇಕು. ಸ್ವಾರ್ಥಿ ಸಮಾಜಕ್ಕೆ ಬುದ್ಧಿ ಗಲಿಸಬೇಕು.

ಇಂದ್ರಾ— ಅಮ್ಮಾ ನೀನೆನಗೆ ತಾಯಿಸ್ವರೂಪಳು. ನಿನ್ನ ಬೋಧನೆಯ ಬೆಳಕಿನಲ್ಲಿಯೇ ಸಾಗುವೆ ಇಲ್ಲವೆ ದೇಹ ನೀಗುವೆ.

**ಪದ**

ದೇವಾ ಜಗದ ರಕ್ಷಕಾ। ನೀನೆ ಜಗದ ನಾಶಕಾ।
ಧ್ಯಾನಿಪರ ಮನಸಂಚರನೆ। ದೀನ ಜನರ ಮಂದಾರನೆ॥ಪ॥
ಶೃತಿಶಾಸ್ತ್ರದ ಮತವ ಅರಿಯೆ। ಗರತಿ ಗತಿಯಲಿ ಸಾಗುವೆ
ಮನ ಮಡಿಮಾಡಿ ಅಡಿ ಇಡುವೆ। ಮನ್ನಿಸಿ ದಾರಿ ತೋರೋ
(ಹೋಗುವಳು)

**ಶಿಲಾಕಾಂತ**— (ಇಂದ್ರಾದೇವಿಯನ್ನು ನೋಡಿ) ಕಲ್ಲು! ಏ ಕಲ್ಲು

**ಕಲ್ಲುಬಾಯಿ**— ಏನ್ರಿ ಇದು ಕಿವಿ ಗಡಿಚಿಕ್ಕುವ ಹಾಗೆ ಕೂಗುವದು.

**ಶಿಲಾಕಾಂತ**— ನನ್ನನ್ನು ನಾಯಿ ಎಂದು ತಿಳಿದಿರುವಿಯೇನು?

**ಕಲ್ಲುಬಾಯಿ**— ಅಲ್ಲಾ ವಿಶೆಷಾರ್ಥದಲ್ಲಿ ಅಂದೆ.

**ಶಿಲಾಕಾಂತ**— ವಿಶೇಷಾರ್ಥ ಆರಂಭವಾಯಿತೆ ನಿನ್ನಲ್ಲಿ?

**ಕಲ್ಲುಬಾಯಿ**—ನೀವೇ ಹೇಳಿದ್ದಿರಲ್ಲಾ ಅದರ ಪ್ರಥಮಪ್ರಯೋಗ

**ಶಿಲಾಕಾಂತ**— ಇರಲಿಬಿಡು ಕಲ್ಲು. ಈಗಲೇ ಹೋದವಳು ಯಾರು?

**ಕಲ್ಲುಬಾಯಿ**— ಸಾವುಕಾರ ಸುರೇಶನ ತಂಗಿ ಇಂದ್ರಾ!

**ಶಿಲಾಕಾಂತ**— ಇಲ್ಲಿಗೇಕೆ ಬಂದಿದ್ದಳು.

**ಕಲ್ಲುಬಾಯಿ**— ಪಾಪ! ಸಣ್ಣ ಹುಡುಗಿ ಮುಪ್ಪಿನಮುದುಕ ಧನದತ್ತರಿಗೆ ಕೊಡಲು ಮುಂದಾದ ಅವರ ಅಣ್ಣನ ಹೀನವಿಚಾರ ಅತ್ತು ಅತ್ತು ಹೇಳ್ತು ನನ್ಮುಂದೆ. ತನ್ನ ಹೊಟ್ಟೆಯೊಳಗಿನ ದುಃಖವನ್ನು ಹೇಳಿ ಹಗರು ಮಾಡಿಕೊಂಡಿತು

**ಶಿಲಾಕಾಂತ—** ಧನದತ್ತರು ಸಿರಿವಂತರು. ಸದ್ಗುಣ ಶಾಲಿಗಳು ಮೇಲಾಗಿ ಉಚ್ಚಕುಲದವರು. ಇಳಿವಯಸ್ಸಿನವರಾದರೂ ಎಳೆವಯಸ್ಸಿನವರಷ್ಟು ತೇಜವಿದೆ ಅವರ ಮುಖದಲಿ. ಆ ಹುಚ್ಚು ಹುಡುಗಿಗೆ ಬುದ್ಧಿ ಇಲ್ಲ. ಸ್ತ್ರೀ ಸ್ವಾತಂತ್ರ್ಯ ಯುಗದಲ್ಲಿ ಗುರುಹಿರಿಯರಿಗೆ ಮಾನವಿಲ್ಲ.

**ಕಲ್ಲುಬಾಯಿ—** ಸ್ತ್ರೀಸ್ವಾತಂತ್ರದ ವಿಷಯವಾಗಿ ನಿಮಗಿಷ್ಟು ತಿರಸ್ಕಾರ ವಿರುವದೆಂದು ನಾನು ತಿಳಿದಿದ್ದಿಲ್ಲ. ಹಣದಾಶೆಗಾಗಿ ಹರೆಯದ ಹೆಣ್ಣು ಮಕ್ಕಳನ್ನು ಮುದುಕರಿಗೆ ಕೊಡಬೇಕೆನ್ನುವಿರಾ? ಇದೆಂತ ನಿಮ್ಮ ವಿಚಾರಾ ಘನಆಚಾರಾ. ಮನುಷ್ಯರಲ್ಲಿ ಸ್ವಲ್ಪು ಸಹಾನುಭೂತಿ ಇಲ್ಲದ ನಿಮ್ಮಕೂಡ ಬಾಳ್ವೆಮಾಡುವದೇ ಸಾಕಾಗೇದ.

**ಶಿಲಾಕಾಂತ—** ಕಲ್ಲು! ನನಗೂ ಸಾಕಾಗೆದ ಈಗಲೇ ನನ್ನ ಮನೆ ಬಿಟ್ಟು ಹೊರಡು ಬೇಗ ಹೊಡಸು ಅಂದೆ.

**ಕಲ್ಲುಬಾಯಿ—** ಸಾಕು! ಸಾಕು!! ಈ ಹಾಳು ಸಂಸಾರಸಾಕು. ಮನೆಬಿಟ್ಟು ಹೋಗಿಬಿಡುವೆ. (ಹೋಗುವ ತಯ್ಯಾರಿ)

**ಶಿಲಾಕಾಂತ—** (ತಡೆದು) ಕಲ್ಲು! ಕೊರಳೊಳಗಿನ ದಾಗೀನಾ ಬಿಚ್ಚಿಟ್ಟು ಹೊರಡು.

**ಕಲ್ಲುಬಾಯಿ—** ಇದರಲ್ಲೇನಿದೆ ನಿಮ್ಮ ಹಕ್ಕು. ನಮ್ಮಪ್ಪ ಕೊಟ್ಟ ಸಾಮಾನುಗಳು.

**ಶಿಲಾಕಾಂತ—** ನಿನ್ನ ಕೆಟ್ಟ ಮುಖ ನೋಡಿದ್ದರೆ ಮಾಡಿಕೊಳ್ಳುತ್ತಿದ್ದಿಲ್ಲ. ಆದರೆ ಈ ಸಾಮಾನುಗಳನ್ನು ನೋಡಿ ಮಾಡಿಕೊಂಡಿದ್ದೇನೆ. ಬಿಚ್ಚಿಡುಮೊದಲು.

**ಕಲ್ಲುಬಾಯಿ—** ನಿಮ್ಮ ಮಸಿಅರಿವಿಯಂತ ಮುಖ ನೋಡಿದ್ದರ ನಾ ಮಾಡಿಕೊಳ್ಳತಿದ್ದಿಲ್ಲ. ನಿನ್ನ ಹೊಲ-ಮನೆ ನೋಡಿ ಕೊಟ್ಟ ನಮ್ಮಪ್ಪ ಅವನ ಮನಿ ಹಾಳಾಗಾ. (ಅಳುವಳು)

**ಶಿಲಾಕಾಂತ—** ಕಲ್ಲು! ನೀ ಬಾಳಜಗಳಗಂಟಿ! ಕಣ್ಣಲ್ಲಿ ಕಟ್ಟದೆ ಕಣ್ಣೀರಿನ ಕಟ್ಟೆ! ನೀನತ್ತರೆ ನನಗೂ ಅಳುವು ಒಟ್ಟರಿಸಿ ಬರುತ್ತದೆ.

ಅಳುವದನ್ನ ನಿಲ್ಲಿಸು. ನೀ ಹೇಳಿದಂತೆ ಕೇಳ್ತಿನಿ ತಿಳಿಯಿತೋ ಇಲ್ಲೋ?

**ಕಲ್ಲು ಬಾಯಿ**— ಮಾತು ಮಾತಿಗೆ ಮನೆಬಿಟ್ಟು ಹೋಗು ಅನ್ನುವದು ಮಿತಿಮೀರಿದೆ. ಇನ್ನುಮೇಲೆ ಮನೆಬಿಟ್ಟು ಹೋಗು ಅಂದ್ರ ನಾ ಇಲ್ಲಿ ಇರುವದೇ ಇಲ್ಲ.

**ಶಿಲಾಕಾಂತ**— ಎಂದೆಂದೂ ಅನ್ನುವದಿಲ್ಲ. ಆಯಿತೋ ಇಲ್ಲೋ ಗ್ರಹಚಾರ ಕೆಟ್ಟದ. (ಹೋಗುವನು)



## ೬ ನೇ ಪ್ರವೇಶ

ಸ್ಥಳ:— ನೀರಿಗೆ ಹೋಗುವ ರಸ್ತೆ

**ನೀಲಾ—** **ಪದ**

ರಾಗ— ತಾಳ-

ಮೂಡುತಿದೆ ಮನದಿ। ಮಹಾಭಯ। ಕಪಟ ಜಾಲಗಳಿಗಾಗಿ ।।ಪ।।
ಕುಲಜರ ಛಲವ ಕೊರೆಯುತಿಹುದು।ವಿಷಮಯ ರೋಷವು।
ಸುಡುತಿಹುದು ಪ್ರಾಣ ।।೧।।

ದೇವಾ! ನನ್ನನ್ನು ಕೀಳು ಕುಲದಲ್ಲೇಕೆ ಹುಟ್ಟಿಸಿದೆ. ಹುಟ್ಟಿಸುವದು ನಿನ್ನ ಕರ್ತವ್ಯವಾದರೆ ಈ ಕಾಯಕ್ಕೇಕೆ ಸೌಂದರ್ಯದ ದುರ್ಗಂಧಮಯ ಬಣ್ಣ ಬಳಿದೆ. ಈ ದುರ್ಗಂಧಮಯ ಸೌಂದರ್ಯಕ್ಕೆ ಮರುಳಾಗಿ ಧಾವಿಸಿ ಬಂದು ಕಾಡುತಿಹರು ಕಾಮುಕ ಕ್ರಿಮಿಗಳು. ಕೀಳು ಕುಲಜರೆಂದು ಗೀಳು ಮಾಡಿ ಹಗೆನುಡಿಯಾಡುತಿಹರು ಬಲ್ಲಿದ ಕುಲಜರು. ಬಡತನವೊಂದು ಬಿಗಿದಪ್ಪಿ ದೇಹ ಪುಡಿ ಪುಡಿ ಮಾಡುತಿಹುದು ನಿತ್ಯ. ತಾಳಲಾರದೆ ತಳಮಳದಿಂದ ಮನವು ಕೊರೆಯುತಿದೆ. ಆಪತ್ತು ವಿಪತ್ತುಗಳ ಬಿಸಿ ಗಾಳಿಗೆ ತನು ಕರಗುತಿದೆ. ಕಾಮುಕರ ಕುಚೇಷ್ಟೆಗೆ ಹೃದಯಗುಂಜು ಗುಂಜಾಗಿದೆ. ದೇವಾ ನೀ ಕರುಣೆ ಎನ್ನುದನು ನಾಬಲ್ಲೆ. ಮನವ ನಿನ್ನಲ್ಲಿಟ್ಟು ಹಗಲಿರಳು ಪೂಜಿಸುವ ಈ ಅನಾಥಳ ಆರ್ತ್ತಸ್ವರವು ಕೇಳಲಾರದೆ? ನಿನ್ನನ್ನು ವರ್ಣಿಸ ಬಲ್ಲ ಶಬ್ದ ಪತೀತಳಾದ ನಾನು ಎಲ್ಲಿಂದ ತರಲಿ. ನೀನೇ ಕರುಣಿಸಿ ಒಲಿ. ಇಲ್ಲವಾದರೆ ಬೇಗಕೊಡು ಮೃತ್ಯುದೇವತೆಗೆ ಬಲಿ.

**ಸುರೇಶ—** (ಪ್ರವೇಶ) ಕಂಗೆಟ್ಟು ಕೂಗದಿರು ಕುಮಾರಿ. ಒಲಿದು ಬಂದಿರುವೆನಾ ನಿನ್ನಮೇಲಿನ ಕರುಣೆಯಲಿ. ನನ್ನ ಮನೆ ಸೇರಿದಂದು ಬಡತನವು ಬಯಲಾಗಿ ಆಡುವಿ ಸುಖದ ಉಯ್ಯಾಲೆಯಲಿ. ನಿರಾಶೆಯಲ್ಲಿ

ಮೃತ್ಯುದೇವತೆಗೆ ಕೊಡದಿರು ನಿನ್ನಬಲಿ ಅಸಹಾಯ ಜೀವಿಯಾದ ನಿನಗೆ ಸಹಾಯಕೋರಬೇಕೆಂದು ಬಂದಿದೆ ನನ್ನ ಮನದಲ್ಲಿ. ಇನ್ನುಮೇಲೆ ಇರದಿರು ನನ್ನನ್ನಗಲಿ.

**ನೀಲಾ**— ಅಸಹಾಯ ಜೀವಿಗಳಿಗೆ ಸಹಾಯಕೋರುವ ಹೃದಯ ನಿನ್ನಲ್ಲಿಲ್ಲ. ಕರುಣೆಯ ಅಮೃತ ಜಲವಿಲ್ಲ. ಕಾಮವಾಸನೆಯ ವಿಷದ ಶಿಲೆಯೊಡೆದ ಸಲುಗೆಯ ಮಾತು ಬೇಡೆನ್ನ ತಂದೆ. ಹಣದಾಶೆಗಾಗಿ ಮುಚ್ಚಂಜೆಯಲಿ ಮನೆಯ ಮುಂಬಾಗಿಲಲ್ಲಿ ನಿಂತು ನೋಡುತಿಹ ದೇವದಾಸಿಯರು ಕಾಮವಾಸನೆಗಾಗಿ ಸುಂದರ ಉಪವನದಲ್ಲಿ ಸುತ್ತುತಿಹ ಸ್ವಚ್ಛಂದ ವೃತ್ತಿಯ ಸ್ತ್ರೀಯರು. ಬಂಡವಲ ಶಾಹಿಯ ಹಿಂಡಲು ಹಿಂಡುಗಟ್ಟಿ ತಿರುಗುತಿಹ ಬುಗವುಗಿದು ಡೊಂಕ ಡೊಂಕಾಗಿ ಬೈತಲೆ ತೆಗೆದ ಬಾಜಾರ ಬಸವಿಯರು ಸಡಿಲು ಮುಡಿಯಕಟ್ಟಿ, ಪರಿ ಪರಿ ಬಣ್ಣದ ಪತ್ತಲವನ್ನುಟ್ಟು ಗೀರು ಕುಂಕುಮವ ಹಚ್ಚಿ ಸೀಮಂತನಿಯರ ಸೋಗುಹಾಕಿ ತಿರುಗುತಿಹ ಪ್ಯಾಷನ್ನದ ಪುತ್ತಳಿಗಳು ಇಷ್ಟು ಬಗೆಯ ಸ್ತ್ರೀಯರು ನಿಮ್ಮಂಥವರಿಗಾಗಿ ಇರುತಿರಲು ಈ ಕೀಳು ಕುಲದ ಕುಮಾರಿಯಾದ ನನ್ನನ್ನು ಕಾಡುತಿರುವಿ ಏಕೆ ಅಡಿಗಡಿಗೆ?

**ಸುರೇಶ**— ನೀಲಾ! ನವಿಲಿಗೆ ಗಿರಿಯಲ್ಲದೆ ಹುಲ್ಲು ಮರಡಿ ರುಚಿಸುವದೇ? ಕೋಗಿಲೆ ನವವಸಂತದಲ್ಲಿ ಗಾನಮಾಡುವದಲ್ಲದೆ ಗ್ರೀಷ್ಮ ಋತುವಿನಲ್ಲಿ ಗಾನಮಾಡುವದೇ? ಭ್ರಮರ ಪರಿಮಳ ಪುಷ್ಪಕ್ಕಲ್ಲದೆ ದುರ್ಗಂಧ ಪುಷ್ಪಕ್ಕೆಳಸುವದೇ? ಮಲ್ಲಿಗೆಯ ಹೂವನ್ನಲ್ಲದೆ ಕಣಗಲದ ಹೂವನ್ನು ಮೂಸಿಸುವ ಮೂರ್ಖನು ನಾನಲ್ಲ. ನೀಲಾ!. ನಿನ್ನ ಚಲುವಿಕೆಯ ಚನ್ನ ಮಲ್ಲಿಗೆಗೆ ಮೆಚ್ಚಿ ಬಂದಿರುವೆನಾ. ಜಾತಿಯ ಮುಳ್ಳುಚುಚ್ಚಿ ಮನ ಚಿವುಟದಿರು.

**ನೀಲಾ**— ಈ ಕಾಯದ ಚೆಲುವಿಕೆಗೆ ಮರುಳಾಗಿ ಒಳಗಿನ ಅಮರ ಆತ್ಮನಮರೆತು ಮರುಳಾಟವಾಡದಿರು. ಮರದಲ್ಲಿ ಕಾಣದಂತೆ ಇರುವ ಬೆಂಕಿಯಂತೆ ಭೂಗರ್ಭದಲ್ಲಿ ಭೋರ್ಗರೆವ ಲಾವ್ಹಾರಸದಂತೆ ಇರುವದು

ಗರತಿಯ ಧರ್ಮ! ಬಯಸಿದರೆ ಭಸ್ಮವಾಗುವದು ನಿನ್ನ ಕಲುಷಿತ ಕಾಯಾ! ಮೋಹಿಸದಿರು ಭರತ ಭೂಮಿಯ ಆರ್ಯಕುಮಾರಿಯ ಅಚ್ಚ ನೆತ್ತರದ ಮಗಳು ನಾ.

**ಸುರೇಶ**— ಕೀಳು ಕುಲದ ಕುಮಾರಿಯರಿಗೆಲ್ಲಿದೆ ಆರ್ಯ ಕುಮಾರಿಯ ಅಚ್ಚ ನೆತ್ತರದ ಬಣ್ಣ. ಕೀಳು ಕೆಲಸಮಾಡಿ ಹೊಟ್ಟೆ ಹೊರೆದುಕೊಳ್ಳುವ ನಿಮ್ಮ ಹಾಳುಕುಲಕ್ಕೆಲ್ಲಿದೆ ಅಚ್ಚ ನೆತ್ತರದ ಕಣ. ಹಣದ ಹಂಬಲಕ್ಕಾಗಿ ದೇವರ ಹೆಸರಿನಿಂದ ಸೂಳೆಯಾಗಿ ಬಾಳಿ ಅದಾರಿಗೋ ಬಸರಾದ ಬಸವಿಯ ಮಗಳಾದ ಎಲೆ ಹೆಣ್ಣೆ! ನಿನಗೆಲ್ಲಿದೆ ಗರತಿಧರ್ಮದ ಮನ! ನಿನ್ನ ಹೃದಯದಲ್ಲಿ ತುಂಬಿದೆ ವಿಷಯವಾಸನೆಯ ಕತ್ತಲೆಯ ಕಣ!

**ನೀಲಾ**— ಕಲ್ಲಿನ ಹೃದಯದಲ್ಲಿ ಹುದುಗಿದ ಬಂಗಾರದಂತೆ ಇದೆ. ಗರತಿಯ ಧರ್ಮದ ಚೊಕ್ಕ ಚಿನ್ನ! ಕಾಮುಕ ಕಣ್ಣಿಗೆ ಕಾಣುತಿದೆ ಮೇಲಿನ ಆವರಣ!! ಬಸವಿಯ ಬಸರಿನಿಂದ ಬೆಳೆದ ಈ ಬಾಲೆಯ ಭಾವದಲ್ಲಿದೆ ಶೀಲದರುವಿನ ಗುಣ!!! ನಿನ್ನ ಹೃದಯದಲ್ಲಿದೆ ವಿಷಯವಾಸನೆಯ ದುರ್ಗಂಧಮಯ ಕೀಳುಕಣ! ಕೀಳು ಕುಲದಲ್ಲಿ ನಾ ಜನಿಸಿದರೂ ಎನ್ನ ಕೂದಲೆಳೆಯಲಿ ಸಿಡಿದೇಳುವದು ಬೆಂಕಿಯ ಕಣ! ಕುಲಜರಾದ ನಿಮಗೆ ತಿಳಿದಿಲ್ಲ ಅಂತ್ಯಜರ ಆತ್ಮದ ಪರಿಜ್ಞಾನ ಬಸವಿಯ ಮಗಳೆಂದು ಬಿರುನುಡಿಯಾಡಿ ಹೃದಯ ಗಾಯಗೊಳಿಸದಿರು ವಿನಾಕಾರಣ! ಗರತಿಯ ಗತಿಯಲಿ ಸಾಗುವೆನಾ.

**ಸುರೇಶ**— ಹುರಳಿಲ್ಲ ಗರತಿಯ ಹಳೆಯ ಶಬ್ದದಲಿ. ತಿರು ತಿರುಗಿ ಬಳಸದಿರು ಗರತಿಯ ಹಾಳು ಧರ್ಮ! ಗರತಿಯ ಧರ್ಮ ಅರಿಯದು ನಿಮ್ಮ ಅಂತ್ಯಜಜಾತಿ! ಇದಕೆ ಸಾಕ್ಷಿ ನಿಮ್ಮ ಜಾತಿಯಲಿ ಗುಂಪು ಗುಂಪಾಗಿ ತಿರುಗುತಿಹ ದೇವದಾಸಿ ದೇವದಾಸಿಯ ಹೊಟ್ಟೆಯಲಿ ಹುಟ್ಟಬಂದ ನೀನೇ ಇದಕೆ ಬಲವಾದ ಸಾಕ್ಷಿ. ಹಗರಣದಿಂದ ನಗುತ್ತ ನಲಿಯುತ್ತ ಕಾಮುಕರಿಗೆ ಒಲಿಯುತ್ತ ಸಂಪತ್ತು ಸೆಳೆಯುತ್ತ ಸ್ವೇಚ್ಛೆಯಿಂದ ಸಂಚರಿಸುವದು ಬಿಟ್ಟು ಗರತಿಯ ಹಾಳುಶಬ್ದ ಬಳಸಿ ಕಡೆಗಾದರೆ ಹಾರುವದು ನನ್ನ ಪ್ರಾಣಪಕ್ಷಿ. ನನ್ನ ಜೀವನದ ಜೊತೆಗಾರ್ತಿಯಾಗಿ ಜೀವಿಸುಬಾ ನೀಲಾ!

**ನೀಲಾ**— ಪಶುಬುದ್ಧಿಗೆ ಗೊತ್ತಾಗದು ಗರತಿಯುದರ್ಮ. ದೇವದಾಸಿಯು ಮಗಳೆಂದು ಸಿಕ್ಕ ಸಿಕ್ಕಂತೆ ಬಾಯಿ ಬಿಡದಿರು ಸಾವುಕಾರಾ! ಕುಲ ಜರ ದಬ್ಬಾಳಿಕೆಯಿಂದ ದಲಿತರ ಕುಲದಲ್ಲಿ ದೇವದಾಸಿ ಪದ್ಧತಿ ಜನ್ಮವೆತ್ತಿ ಅಂತ್ಯಜ ಕುಲಕೆ ಹಚ್ಚಿದೆ ಕಲಂಕ. ಈ ಕಲಂಕದ ಕಿಡಿಯನ್ನು ಈ ಕುಲವತಿಗೆ ಹಚ್ಚದಿರು.

ಜಾತಿಹೀನರ ಮನೆಯು ಜೋತಿ ತಾ ಹೀನವೇ
ಜಾತಿ ವಿಜಾತಿ ಎನಬೇಡ ದೇವನೊಲಿದಾತನೆ ಜಾತಾ ಸರ್ವಜ್ಞ||

ಎಂದು ಸರ್ವಜ್ಞರು ಸಾರಿ ಹೇಳಿದ್ದಾರೆ. ಹೆಣ್ಣಿನ ಹುಚ್ಚಾಟ ಬಿಟ್ಟು ಹೊರಡು ಪಿಶಾಚಿ.

**ಸುರೇಶ**— ಹುಚ್ಚು! ಹೆಣ್ಣಿನ ಹುಚ್ಚಿನಲ್ಲಿ ಹರಿಹರಾದಿಗಳು ಓಡಾಡಿದರು. ಸುರಾಸುರನು ಹೆಣ್ಣಿಗೆ ಮರುಳಾಗಿ ಆದರ ಛಾಯೆಯು ಹಿಂಬಾಲಿಸಿ ತಿರುಗಿಹರು ಹೆಣ್ಣಿನ ಹುಚ್ಚಿನಲಿ. ಋಷಿ-ಮುನಿಗಳು ಕುರುಡಾಗಿ ಕುಣಿದಿಹರು. ರಾಜರು ರಾಜತ್ಯಾಗ ಮಾಡಿಹರು. ಮಾನವರು ಮನೆ-ಮಾರು ತೊರದಿಹರು. ನೀಲಾ! ಹೆಣ್ಣಿನ ಹುಚ್ಚಿನಿಂದ ಜಗತ್ತೇ ಎಚ್ಚರದಪ್ಪಿ ಕುಣಿಯಲೆಂದು ವಿರಂಚಿಯು ತನ್ನ ಕುಂಚದಿಂದ ಪರಿಶ್ರಮ ವಹಿಸಿ ಚಿತ್ರಿಸಿ ಚಲ್ಲಿಹನು ಹೆಣ್ಣೆಂಬ ಮಾಟದ ಬೊಂಬೆಯನ್ನು ಮಾನದ ಪ್ರಪಂಚದಲ್ಲಿ. ಎಲೆ ಗರತಿಯು ಗತ್ತುಗಾರಿಕೆಯ ಗೊಂಬೆ ನಿನ್ನ ಮುಂಗುರುಳಿನ ಸಿಂಗಾರವೆನ್ನಂಗವನೆ ಕುಣಿಸುತಿದೆ. ನಿನ್ನ ಮುದ್ದುಸುರಿಯುವ ಮುಖ ಕಣ್-ಮನವ ದಣಿಸುತಿದೆ. ಕುಪ್ಪಸದ ಮರೆಯಲ್ಲಿ ತೂಗಾಡುವ ಕುಚಗಳು ಹೃದಯದ ವಿರಹಾಗ್ನಿ ಹೊತ್ತಿಸುತ್ತಿವೆ. ಬಾ ಚೆಲುವಿನ ಹೆಣ್ಣೆ! ನಿನ್ನ ಸೌಂದರ್ಯದ ಸೊಬಗನ್ನು ಸವಿದುಬಿಡುವೆನು. (ಮುಟ್ಟಲು ಹೋಗುವನು)

**ನೀಲಾ**— ಮುಟ್ಟದಿರು! ಮುಟ್ಟದಿರು ನರರಾಕ್ಷಸಾ!! ನನ್ನ ಮುಂಗುರುಳಿನ ಸಿಂಗಾರಾ ಹೆಡೆಯೆತ್ತಿ ಭೋರಿಡುವ ಕಾಳಸರ್ಪದ ಶೃಂಗಿ! ನನ್ನ ಮುಖಕಾಂತಿ ಕಾ ಮೊ ೯ ಡ ಗ ಳ ಮಧ್ಯದಲಿ ಕುಣಿದಾಡುವ ಕೋಲ್ಮಿಂಚಿನ ಬೆಂಕಿ. ಕುಪ್ಪಸದ ಮರೆಯಲ್ಲಿ ತೂಗಾಡುವ ಕುಚಗಳು, ಭೂಗರ್ಭದಲ್ಲಿ ಭೋರ್ಗರೆವ ಲಾವ್ಹಾರಸದ ಕುಂಡ. ಮುಟ್ಟದರೆ ಸುಟ್ಟು

ಬೂದಿಯಾಗಿ ಬಾನ್ಸ್ಥಳದ ಧೂಳಿಕಣದಲಿ ಬೆರೆತುಹೋಗುವದು ನಿನ್ನ ದೇಹ. ಸರಿ ಹಿಂದಕ್ಕೆ

**ಸುರೇಶ**— ಎಲೆ ಹೆಣ್ಣೆ! ಗರತಿಯು ಬೆಂಕಿಯು ಬೆದರಿಕೆಹಾಕಿ ಕಡೆಗಾಗಲು ಹವಣಿಸಿದರೆ ಬಿಡುವವನು ನಾನಲ್ಲ. ಮಾಸದ ಸೌಂದರ್ಯಸ್ವಾದಿಸಲು ಬಂದಿರುವೆನಾ. ನಿನ್ನಿಚ್ಛೆಯಲಿ ಸಾಗಿಬಾ ಮುಟ್ಟಿದರೆ ಮಾಸುವದು ಮಲ್ಲಿಗೆಯ ಹೂವಿನಂತಹ ನಿನ್ನ ದೇಹ.

**ಇಂದ್ರಾ**—(ಪ್ರವೇಶ) ಮುಟ್ಟಿದರೆ ಮಾಸುವದೆಂದು ಹುಟ್ಟಿಸಿರುವ ಆ ಬೊಮ್ಮನು ಮುಟ್ಟಲಾರದ ಕುಲದಲಿ. ವೈಮರೆತು ಯಾರಾದರೂ ಮುಟ್ಟಿದರೆ ಸುಡಲೆಂದು ಇಟ್ಟಿಹನು ಸರ್ವಾಂಗಗಳಲಿ ಗರತಿಯ ಬೆಂಕಿಯನ್ನು. ಕಾಮಾತುರ ಕೈಗಳಿಂದ ಮುಟ್ಟದಿರು ಈ ಕುಲವತಿಯನ್ನು.

**ಸುರೇಶ**— ಇಂದ್ರಾ! ನೀನೇಕೆ ಇಲ್ಲಿಗೆಬಂದೆ.

**ಇಂದ್ರಾ**— ಕುಲವತಿಯರ ಮಾನಹರಣ ಮಾಡುವ ದಾನವರನ್ನು ದಂಡಿಸಲು ನಾನಿಲ್ಲಿಗೆ ಬಂದಿರುವೆ ಅಣ್ಣಾ!

**ಸುರೇಶ**— ಮುಚ್ಚು ಬಾಯಿ ಇಂದ್ರಾ!

**ಇಂದ್ರಾ**— ಮಾನವಧರ್ಮದ ಅರಿವು ನಿನಗಾದಾಗ ಮುಚ್ಚುವದು ನನ್ನ ಬಾಯಿ. ಅಲ್ಲಿಯವರೆಗೆ ಅಣ್ಣನ ಕೀಳ ಕೃತಿಯನು ಖಂಡಿಸುವದು ಈ ಬಾಯಿ.

**ಸುರೇಶ**— ಇಂದ್ರಾ! ಸಲುಗೆಯಿಂದ ಬೆಳೆಯಿಸಿದ ನನ್ನ ದೋಷ.

**ಜೀವನ**— (ಪ್ರವೇಶ) ಅದಾವದೃಶ್ಯ ಕಾಣುತಿರುವೆ.

**ನೀಲಾ**— ಅಣ್ಣಾ! ಉಚ್ಚಕುಲಜರು ಅಚುತಕುಲದ ಕುಮಾರಿಯರಮೇಲೆ ದಬ್ಬಾಳಿಕೆ ಮಾಡುವ ದೃಶ್ಯ! ಈ ದಬ್ಬಾಳಿಕೆ ಎದುರಿಸುವ ಉದಾರ ಹೃದಯದ ಮತ್ತೊಂದು ದೃಶ್ಯ! ದೃಶ್ಯ ದೃಶ್ಯದ ನಡುವೆ ನಿಂತ ನಿನ್ನ ದುರ್ಭಾಗ್ಯ ಭಗಿನಿಯ ದೃಶ್ಯ.

**ಜೀವನ**— ಸಿರಿವಂತರೇ! ಈ ದೀನರನ್ನು ನಿರ್ದಯದ ಸುತ್ತಿಗೆಯಿಂದ ಬಡಿದು ಹೃದಯ ಘಾಯ ಮಾಡಬೇಡಿರಿ. ವ್ಯರ್ಥವಾಗಿ ಪೀಡಿಸುವದು ಇದಾವ ನ್ಯಾಯ.

**ಸುರೇಶ**— ನ್ಯಾಯ-ಅನ್ಯಾಯದ ನಿರ್ಣಯವಿಲ್ಲ. (ಹೋಗುವನು)

**ಜೀವನ**— ಇಂದ್ರಾದೇವಿ ಇದಾವ ವಿಚಾರ.

**ಇಂದ್ರಾ**-- ದಾನವರನ್ನು ದಂಡಿಸುವ ಸಾಕಾರ.

**ನೀಲಾ**— ಅಮ್ಮಾ! ಈ ಅನಾಥರಮೇಲೆ ನಿಮ್ಮ ದಯೆ ಎಷ್ಟು? ಹಿಂದೊಮ್ಮೆ ಹಣಕೊಟ್ಟು ಋಣಮುಕ್ತರನ್ನು ಮಾಡಿ ಸಾಲದಭಾರ ಇಳಿಸಿದಿ ಇಂದೆನ್ನ ಮಾನ ರಕ್ಷಿಸಿದಿ. ನಿಮ್ಮಂಥ ಮಾತೆಯರ ಆತ್ಮಜ್ಯೋತಿಗಳು ನಕ್ಷತ್ರರೂಪದಲಿ ಭಾರತವ ಬೆಳಗುತಿಹವು. ನಿನ್ನದೆಷ್ಟು ಪ್ರೇಮ.

**ಇಂದ್ರಾ**— ನೀಲಾ! ನಿನ್ನಲ್ಲಿ ಶೀಲವಿದೆ. ಸ್ತ್ರೀಧರ್ಮದ ಪ್ರಕಾಶವಿದೆ. ಇದುವೆ ಭಾರತ ಬೆಳಗುವ ಗರತಿಯ ಕೀರ್ತಿ ಕಾಹಿನಿ! ನವಜೀವನದ ಮಂಜುಳದನಿ. ಹಿಂದುಧರ್ಮದ ಅಮರವಾಣಿ.

**ಜೀವನ**— ನವಜೀವನ ಇದುವೆ ಮಾನವ ಸಮಾನತೆಯ ವಿಶಾಲ ಧರ್ಮ. ಈ ಧರ್ಮದ ಪ್ರವಾಹ ಭಾರತದಲಿ ಹರಿದಾಗಲೇ ಹರಿಜನೋದ್ಧಾರ. ಧನ್ಯ ದೇವಿ ನಿನ್ನ ಆತ್ಮವಿಚಾರವೇ ಧನ್ಯ.

**ಇಂದ್ರಾ**— ಪದ

ರಾಗ- ತಾಳ-

ಭವಾ ಭವ ಮೋಹತಾಳಿ ವಿಮಲಾ ಧರ್ಮ ಸಾರಿ। ಚರಿಪವನಿತೆ ಬಾಲೆ।
ಕುಮಾರಿ ಧೀರೆ। ದಲಿತೋದ್ಧಾರಿ ನವಜೀವನವಿರಾಗಿ। ಸಾರಿ॥



# ೩ ನೇ ಅಂಕ

## ೧ ನೇ ಪ್ರವೇಶ

(ಸ್ಥಳ– ಮಲ್ಲವ್ವನ ಗುಡಿಸಲು)

**ಮಲ್ಲವ್ವ—** (ಮಗ ಮಾಧೂನಮುಂದೆ ಕುಳಿತು) ಮಾಧಣ್ಣಾ ಮಾತಾಡು. ಹಾಲು-ಸಕ್ಕರೆ ತಂದಿರುವೆ ಕುಡಿ ಏಳು. ಕಣ್ಣುತೆಗೆ ಹೊರಗಿನಿಂದ ಬಂದೊಡನೆ ಅವ್ವಾ ಎಂದು ಅನ್ನುವವನು ಇಂದೇಕೆ ಸುಮ್ಮನಿರುವೆ. ಮಗು ನಿನಗಾಗಿ ನಾನು ಬದುಕಿರುವೆ, ಬಾಳ್ವೆ ಮಾಡುತಿರುವೆ. (ಮೈಯನ್ನು ಮುಟ್ಟಿ) ಮೈ ಮುಟ್ಟಿದರೆ ಕೈ ಸುಡುವಂತಹ ಜ್ವರ! ಮಾತಾಡಲು ಬರುವದಿಲ್ಲವೇ? ಈ ಪಾಪಿಯ ಹೊಟ್ಟೆಯಲಿ ಹುಟ್ಟಿ ತಾಪಕ್ಕೆ ಗುರಿಯಾಗಿ ಕೋಪಿಸಿಕೊಂಡಿರುವಿಯಾ? ಮಗು! ಮಗು!! ಮಾತಾಡಲು ಬಾಯಿಯಿಲ್ಲ. ಏನುಮಾಡಲಿ, ಯಾರಿಗೆ ಹೇಳಲಿ, ನನಗಾಗಿ ಯಾರೂ ಇಲ್ಲ. ಅಯ್ಯೋ! ವಿಧಿಯೇ ನನ್ನನ್ನು ಈಪರಿ ಏಕೆ ಕಾಡುತಿರುವೆ. ಹೊಟ್ಟೆಗೆ ಹಾಕಲು ಗಂಜಿಯಿಲ್ಲ. ಔಷಧತರಲು ರೊಕ್ಕವಿಲ್ಲ. ಮಹದೀಶ್ವರಾ! ನೀನೇ ಕಾಪಾಡು. ನಿನ್ನಹೊರ್ತು ನನಗಾರು ಇಲ್ಲ. (ಮಹದೀಶ್ವರನ ಹೆಸರಿನಿಂದ ಬೂದಿ ಹಚ್ಚಿ) ದೇವಾ! ನನ್ನ ಮಗನ ರೋಗ ಕಡಿಮೆಯಾದರೆ ನಿನ್ನ ರಾಜಂಗಳ ಗೂಡಿಸುವೆ. ಗಲ್ಲೀಪವ ಮಾಡಿಸುವೆ. ಬಡವಿಯಾದರೂ ದುಡಿದುತಂದು ನಿನ್ನ ಹರಿಕೆ ಮುಟ್ಟಿಸುವೆ. ನನ್ನ ಮಗನ ಜೀವ ಉಳಿಸು. (ಮಲಗುವಳು)

**ನೀಲಾ—** (ಪ್ರವೇಶ) ಮಾಧೂನ ರೋಗ ಕಡಿಮೆಯಾಗಿಲ್ಲ. ಚಿಕ್ಕಮ್ಮ ಅತ್ತು ಅತ್ತು ಮಲಗಿರುವಳು ನೆಲದಮೇಲೆ. ಉಣಲು ಅನ್ನವಿಲ್ಲದೆ, ರೋಗ ಬಂದರೆ ಔಷಧವಿಲ್ಲದೆ ಅಂತ್ಯಜ ಸಮಾಜದ ಹಸುಗೂಸುಗಳು ಸತ್ತರೂ ಕೇಳುವವರಾರೂ ಇಲ್ಲ. ದೀನ-ದಲಿತರ ಜೀವನ ಕಾಡು

ಜೀವನ, ಹಾಳು ಜೀವನ. ದೇವಾ! ಈ ಜೀವಿಗಳನ್ನು ಕೊರಗಿ, ಮರಗಿ ಸಾಯಲೆಂದು ಹೊಲೆಯ ಕುಲದಲ್ಲಿ ಹುಟ್ಟಿಸಿರುವಿಯಾ? ಈ ದುಃಖಿಗಳನ್ನೇಕೆ ಹುಟ್ಟಿಸಿದೆ ತರು-ಮರಗಳಲ್ಲಿ ಹುಟ್ಟಿಸಬಾರದಿತ್ತೇ? ದೇವಾ ನೀನು ದಯಾನಿಧಿಯಲ್ಲವೇ?

**ಜೀವನ—** (ಪ್ರವೇಶ) ನೀಲಾ! ದೇವರು ದೀನದಲಿತರಿಗಾಗಿ ನಿಷ್ಠುರನಾಗಿದ್ದಾನೆ ಕಠೋರನಾಗಿ ಕಲ್ಲಾಗಿ ಕುಳಿತಿದ್ದಾನೆ. ಕೀಲಿ ಜಡಿದ ಕಲ್ಲಿನ ಗುಡಿಯೊಳಗೆ, ನಮ್ಮ ರೋಧನೆ ಅವನ ಮಂದಿರಕ್ಕೆ ಮುಟ್ಟಲಾರದು. ನಿತ್ಯ ಕಣ್ಣೀರು ಕರೆದು ಕಡೆಗೊಮ್ಮೆ ಕಾಯ ನೀಗಬೇಕಾಗಿದೆ ಈ ಅಂತ್ಯಜ ಸಮಾಜ.

**ಮಲ್ಲವ್ವ—** (ಎದ್ದು) ಜೀವನಾ! ಮಾಧೂ ಜ್ವರದಿಂದ ಹಾಸಿಗೆ ಹಿಡಿದು ಹತ್ತು ದಿನಗಳಾದರೂ ಒಂದು ದಿನ ಮಾತು ಇಲ್ಲ. ಅನ್ನ-ನೀರುಗಳಿಲ್ಲ. ಬದುಕುವ ಆಶೆ ಬಯಲಾಗಹತ್ತಿದೆ. ಅಪ್ಪಾ! ಏನುಮಾಡಲಿ ಎಲ್ಲಿಗೆಹೋಗಲಿ. ಮಾಧೂನ ಜೀವ ಉಳಿಸು ಜೀವನಾ!

**ಜೀವನ—** ಅಮ್ಮಾ! ಪಾಪಿಗಳು ನಾವು. ನಮ್ಮೆದೆಯಮೇಲೆ ಸಾವಿನ ನರ್ತನ ನಿತ್ಯ ನಡೆದಿದೆ. ದುಃಖ-ದುಮ್ಮಾನ ರೋಗ-ರುಜಿಗಳಿಂದ ನರಳುವದು ನಮ್ಮೀ ಕಾಯದ ಕರ್ಮ! ಬಾಳಿನ ಮಾರ್ಗದಲಿ ಮುಳ್ಳಿನ ಹಾಸಿಗೆಯಿದ್ದರು ಬದುಕುವ ಆಶೆಗಾಗಿ ಸಾ ಹ ಸ ಮಾ ಡಿ ಸಾಗುವದು ಮಾನವ ಧರ್ಮ! ಅದಕಾಗಿ ಅಳದಿರು ತಾಯಿ. ಬಿಕ್ಕೆಬೇಡಿಯಾದರೂ ಹಣ ತಂದು ಔಷಧ ಕೊಡಿಸುವೆನು

**ಮಲ್ಲವ್ವ—** ಹಣ ಕೊಟ್ಟು ಔಷಧ ಕೊಡಿಸುವದು ಬಡವರಾದ ನಮಗೆ ಹೇಗೆಸಾಧ್ಯ. ಹೊತ್ತಿಗೆ ಕೇಳಿರುವೆ. ಮಹಧೀಶ್ವರನಿಗೆ ಕರ್ಪುರಾರುತಿ ಮಾಡಿದರೆ ಜ್ವರ ಕಡಿಮೆಯಾಗುವದೆಂದು ಬಂದಿದೆ ಅದಕ್ಕಾಗಿ ಮಹಧೀಶ್ವರನ ಗುಡಿಗೆ ಹೋಗುವಾ ನಡೆ ಜೀವನಾ!

**ನೀಲಾ—** ಅಣ್ಣಾ! ಹೊತ್ತಿಗೆಗಳು ಬಡವರ ಆಪತ್ತನ್ನು ದೂರ ಮಾಡುವ ಸಾಧನಗಳು. ಮಹಧೀಶ್ವರನ ದಿವ್ಯದರ್ಶನದಿಂದ ಮಾಧೂನ

ರೋಗಪೀಡೆ ನಿವಾರಣೆಯಾಗುವದೆಂಬ ಭಾವನೆ ಹೃದಯದಿ ಉಕ್ಕಿ ಬರು ತಿದೆ ಬೇಗ ಹೋಗುವಾ ನಡೆ.

**ಜೀವನ**— ಹೊಟ್ಟೆ ಹೊರೆದುಕೊಳ್ಳಲು ಸ್ವಾರ್ಥಿಗಳು ನಿರ್ಮಿಸಿದ ಗತ್ತುಗಾರಿಕೆಯ ಗೊಂಬೆಗಳಿಂದ ತುಂಬಿದ ಗ್ರಂಥಗಳು ಹೊತ್ತಿಗೆಗಳು. ಕುಲಜರ ತೊತ್ತುಗಳಾಗಿ ಬಡವರ ಪತ್ತು ಬೆಳಸಿ ತಲೆಯೆತ್ತಿ ನಿಂತಿರುವವು. ಹೊತ್ತಿಗೆಗಳು ಮಾನವರ ಮನದಲಿ ಮೂಢನಂಬಿಕೆ ಹೊತ್ತಿಸಿ, ಹೊತ್ತಿಗೆ ಸರಿಯಾಗಿ ದೇವರ ಹೆಸರಿನಿಂದ ಬಡವರಸೊತ್ತು ಸೆಳೆಯುವ ಸಾಧನಗಳು ಹೊತ್ತಿಗೆಗಳು. ಹೊತ್ತಿಗೆಯ ಮಾತೆತ್ತದಿರು ನೀಲಾ! ಮಾನವರ ಕೈ ಗೊಂಬೆಯಾದ ಮಹಧೀಶ್ವರನಿಗೆ ಕರ್ಪುರಾರುತಿ ಮಾಡಿದರೆ ಪೀಡೆ ದೂರಾ ಗುವದೆಂಬುವದು ಬರಿ ಭ್ರಾಂತಿ.

**ನೀಲಾ**— ದೇವ ದೇವನ ದಿವ್ಯ ದರ್ಶನದ ಭ್ರಾಂತಿಯೇ ಸೌಖ್ಯದ ರಾಶಿ! ಸೋತಮನಕೆ ಸಿಗುವ ಶಾಂತಿ! ದೇವರು ಮಾನವರ ಕೈಗೊಂಬೆ ಯಲ್ಲ. ವಿಶ್ವದ ಅಣು ಅಣುಗಳಲಿ ಅವನ ತೇಜಸ್ಸು ತುಂಬಿ ತುಳುಕುತಿ ಹುದು. ಮಾನಸದರಿಯಲಿ ಭಕ್ತಿ–ಜ್ಞಾನದ ಝರಿ ಹರಿದಾಗ ಪರಮಾತ್ಮನ ದಿವ್ಯರೂಪ ತೋರುವದು. ಮೂಢನಂಬಿಕೆಯಲಿ ದೇವರು ಸಾಕಾರ ರೂಪ ದಲಿ ಕಂಡಿರುವನು. ಬೇಡರ ಕನ್ನಯ್ಯನಿಗೆ, ಮಾದರ ಹರಳಯ್ಯಗೆ, ಕಿನ್ನೂ ರ ಬೊಮ್ಮಯ್ಯಗೆ ಅಣ್ಣಾ! ಶಿವಶರಣಿ ನೆಲ್ಲೂರ ನಿಂಬೆಕ್ಕ, ಹೇಮರಡ್ಡಿ ಮಲ್ಲಮ್ಮನ ಭಕ್ತಿಭಾವನೆಗೆ ಮೆಚ್ಚಿ ತನ್ನ ಮಹಿಮೆಯನ್ನು ತೋರಿಸಿಲ್ಲವೆ. ದೇವರಿಲ್ಲೆಂಬ ನಿರಾಶೆಯ ನುಡಿ ಬಿಟ್ಟು ಮಹಧೀಶ್ವರನಿಗೆ ಕರ್ಪುರಾರುತಿ ಮಾಡಲು ನಡೆ

**ಜೀವನ**— ಕೀಳು ಕುಲದವರಾದ ನಾವು ಮಹಧೀಶ್ವರನ ಮುಂದೆ ಹೋದರೆ ಆಗುವ ಅನಾಹುತದ ಚಿತ್ರ ನನ್ನ ಕಲ್ಪನಾ ಪಟಲದಮೇಲೆ ಮೂಡಿ ಹೃದಯ ನಡುಗಿಸುತಿದೆ. ನನ್ನ ಮನೋಮಂದಿರದಲ್ಲಿಯ ದೇವ ರಮೇಲಿನ ಭಕ್ತಿಯ ಭವ್ಯ ಬಾಗಿಲು ಮುಚ್ಚಿದೆ. ಸಮಾಜದ ಭಯದಿಂದ ನೀನೆಷ್ಟು ಹೇಳಿದರು ಅದು ತೆಗೆಯಲಾರದು. ನಿನ್ನಿಚ್ಛೆಯಂತೆ ಕರ್ಪುರಾ

ರತಿ ಮಾಡಲು ಮಹದೀಶ್ವರನ ಮಂದಿರಕೆ ಸಾಗು. ಔಷಧ ತರಲು ನಾನು ಹೋಗುವೆ. (ಹೋಗುವನು)

(ಮಹದೀಶ್ವರನ ಮಂದಿರದ ಮುಂದೆ ಕೂಸನ್ನು ಹಿಡಿದು)

**ಮಲ್ಲವ್ವ—** ಪದ

ರಾಗ– ಭೈರವಿ ತಾ-

ದೇವಾ ದಯತೋರೋ। ಮಹೇಶಾ। ಕರುಣಿಸೋ।
ಮಗನರೋಗ ನೀ। ನಿವಾರಿಸೋ ॥ಪ॥
ಅನಾಥಳು ನಾ। ಕರುಣಿಸೋ ಪೊರೆಯೋ। ದೇವಾ।
ಮಮದಯಾನಿಧಿ ರಕ್ಷಿಸೋ। ಮಂದಭಾಗ್ಯಳ ಕೊರಗು
ನೀಗಿಸೋ ॥೧॥

**ಪೂಜಾರಿ—** ಹೊಲೆಯ ಬೀರನ ಹೆಂಡತಿ ಮಲ್ಲಿ! ದೇವಮಂದಿರದ ಪೌಳಿಯಲ್ಲಿ ಬಂದು ಅಪವಿತ್ರಮಾಡಿದೆ. ಹೊರಡು ಇಲ್ಲಿಂದ ಶೂದ್ರಳೆ.

**ಮಲ್ಲವ್ವ—** (ಕೂಸನ್ನು ಕೆಳಗಿಟ್ಟು) ಸ್ವಾಮಿ! ನನ್ನ ಮಗನಿಗೆ ಜ್ವರಬಂದು ಹತ್ತು ದಿನಗಳಿಂದ ಅನ್ನ-ನೀರುಗಳಿಲ್ಲ. ಮಾತಾಡಲು ಬಾಯಿ ಇಲ್ಲ. ಕಣ್ಣಲ್ಲಿ ಜೀವಮಾತ್ರ ಉಳಿದಿದೆ. ದೇವರಿಗೆ ಕರ್ಪುರಾರುತಿ ಮಾಡಲು ಬಂದಿರುವೆ. ಬೈದರೂ ಚಿಂತೆಯಿಲ್ಲ. ಮಗನ ಜೀವ ಉಳಿಸಿರಿ.

**ಪೂಜಾರಿ—** ಥೂ! ಥೂ!! ನೀವು ಹೊಲೆಯರು. ದೇವಮಂದಿರದಲ್ಲಿ ಬರಲು ಸಾಧ್ಯವಿಲ್ಲ. ಕರ್ಪುರಾರುತಿ ಮಾಡಲು ಅಧಿಕಾರವಿಲ್ಲ. ಎಷ್ಟು ಹೇಳಿದರೂ ನಿಮ್ಮ ಜಾತಿಗೆ ನಾಚಿಕೆಯಿಲ್ಲ.

**ನೀಲಾ—** ಸ್ವಾಮಿ! ಮಾನವರೆಲ್ಲರನ್ನು ಹುಟ್ಟಿಸಿದ ದೇವರು ಒಬ್ಬನೇ. ಅವನ ಮಕ್ಕಳಲ್ಲಿ ಒಬ್ಬರು ದೇವದರ್ಶನಕ್ಕೆ ಪಾತ್ರರು. ಇನ್ನೊಬ್ಬರು ಅಪಾತ್ರರು. ಇದು ನ್ಯಾಯವಲ್ಲ. ಕರ್ಪುರಾರುತಿಗೆ ಕರುಣತೋರಿ ಕೂಸಿನ ಜೀವ ಉಳಿಸಿರಿ!

**ಸುರೇಶ—** (ಪ್ರವೇಶ) ಮಹದೀಶ್ವರನ ಮುಂದೆ ನಿಂತು ಬಡಿವಾರದಮಾತು ಹೇಳುವ ಕೀಳುಜಾತಿಯ ಕಜ್ಜಾಲಿ.

**ಜೀವನ**— (ಪ್ರವೇಶ) ಕಜ್ಜಾಲಿಯ ಕಣ್ಣಿಲ್ಲ. ಪಂಚಮ ಕುಲದ ಕುಮಾರಿಯಲ್ಲಿ. ಶೂದ್ರಳೆಂದು ಹಳಿದು ಹೃದಯದ ತಳಮಳ ಹೆಚ್ಚಿಸಬೇಡಿರಿ. ಭಕ್ತಿಯಿಂದ ಬಂದ ಬಡವರಿಗೆ ದೇವದರ್ಶನ ದಯಪಾಲಿಸಿರಿ.

**ಸುರೇಶ**— ಅಸ್ಪೃಶ್ಯಕುಲದ ಕಲ್ಪನೆ ಮರೆತು ಬುದ್ಧಿಯ ಮದದಿಂದ ದೇವಮಂದಿರ ಪ್ರವೇಶಮಾಡಿದರೆ ಪ್ರಾಣ ಕಳೆದುಕೊಳ್ಳುವಿ ಪತೀತಾ!

**ಶಿಲಾಕಾಂತ**— (ಪ್ರವೇಶ) ಥೂ! ಥೂ!! ಇಲ್ಲಿನೂ ಇದೇನೆ ಸತ್ತ ದನಗಳನ್ನು ತಿಂದು ಹಪ್ಪು ನಾಯಿಗಳಂತೆ ಜೀವಿಸುವ ಅಂತ್ಯಜಾ! ಹೊರಡು ಇಲ್ಲಿಂದ.

**ಜೀವನ**— ಉಣಲು ಅನ್ನ ಸಿಗದಂತೆಮಾಡಿ ಸತ್ತ ದನಗಳನ್ನು ತಿನ್ನಲಿಕ್ಕೆ ಹಚ್ಚಿದವರು ನೀವು. ಸ್ವಾಮಿ ಸೇವಕರೆಂದುಹೇಳಿ ಶೂದ್ರರನ್ನು ಮಾಡಿದವರು ನೀವು. ಜಾತಿ-ಮತಗಳ ಕಟ್ಟಿ, ಪತೀತರೆಂದು ನಾಮಕರಣ ಕೊಟ್ಟು ಪುರದ ಹೊರಗೆ ಇಟ್ಟು ಮುಟ್ಟಲಾರದ ಮಾನವರನ್ನು ಮಾಡಿದವರು ನೀವು. ಸ್ವಾತಂತ್ರ್ಯಯುಗದಲ್ಲಿ ಮಾನವರೆಲ್ಲರು ಒಂದು ಎಂಬ ಭಾವನೆ ಉದಯವಾಗಿದೆ. ಸ್ವಾಮಿ! ಇನ್ನುಮೇಲಾದರೂ ಹೃದಯದಿ ಅಂತಃಕರುಣ ಉಕ್ಕಿಬರಲಿ ಮಾನವನ ಸಮಾನತೆಯ ತತ್ವ ಭಾವ ಬುದ್ಧಿಗೆ ಹೊಳೆಯಲಿ. ಮಹದೀಶ್ವರನ ದರ್ಶನ ಪ್ರಸಾದ ನೀಡಿರಿ.

**ಶಿಲಾಕಾಂತ**— ಥೂ! ಥೂ!! ಮತ್ತು ಅದೇನೆ! ಕೀಳು ಕುಲಜರಾದ ನಿಮಗೆ ಮಹದೀಶ್ವರನ ದರ್ಶನ ಪ್ರಸಾದ ಪಡೆಯುವ ಹಕ್ಕಿಲ್ಲ. ನಡೆ ಚಾಂಡಾಲಾ!

**ನೀಲಾ**— ಉತ್ತಮ ಕುಲದಲ್ಲಿ ಹುಟ್ಟಿದವರೆಂದು ಮತ್ತರಾಗಿ ಮಾತಾಡಬೇಡಿರಿ. ಚಾಂಡಾಲರೆಂದು ಹಳಿದರೆ ಮನದ ತಳಮಳವು ಹೆಚ್ಚುತ್ತಿದೆ. ಭಾರತೀಯರಿಗೆ ಜಾತಿಭೇದವಿಲ್ಲ. ಮೇಲು-ಕೀಳು ಕುಲವಿಲ್ಲ. ಸ್ವಾಮಿ! ನುಡಿದಂತೆ ನಡೆಯದವ ಚಾಂಡಾಲ! ಸಮಾಜಸೇವೆ ಮಾಡದವ ಚಾಂಡಾಲ! ಹೊಲೆಯ ಜಾತಿಯಲ್ಲಿ ಹುಟ್ಟಿದ ನಾವು ಚಾಂಡಾಲರಲ್ಲ. ಭಾರತದ ಕಡು ಬಡವರು. ಸಮಾಜದ ಸೇವಕರು. ಭಾರತ ದೇವಿಯ ಆರಾಧಕರು.

**ಸುರೇಶ**— ಸ್ಪೃಶ್ಯರ ಸರಿಗಟ್ಟುವ ಮಾತೆತ್ತದಿರು ಮಾತಂಗಿಯ ಮಗಳೇ ಸುಡುಗಾಡದಲ್ಲಿ ಬೆಳೆದ ಹೂವು. ದೇವರಿಗೆ ಸಲ್ಲುವವೇ? ನಾಯಿಯ ಮೊಲೆಯಲ್ಲಿಯ ಹಾಲು ದೇವರಿಗೆ ಸಲ್ಲುವವೇ? ಹೊಲೆಯ ಕುಲದಲ್ಲಿ ಹುಟ್ಟಿದ ನೀವು ದೇವಮಂದಿರ ಪ್ರವೇಶ ಮಾಡಬಹುದೇ ಮರುಮಾತಾಡದೆ ಹೊರಡು ಬಡಿವಾರದ ಹೆಣ್ಣೆ!

**ಇಂದುಧರ**— (ಪ್ರವೇಶ) ಬಡಿವಾರದ ಹೆಣ್ಣೆಂದು ಬಡಬಡಿಸದಿರು ಸುರೇಶಾ! ಹೊಲೆಯರೆಂದು ಅಡಿಗಡಿಗೆ ನುಡಿಯದಿರು. ಹೊಲೆಯೊಳಗೆ ಹುಟ್ಟಿ ಕುಲವನರಸುವ ನೀನು ಮಾತಂಗಿಯ ಮಗ! ಕುಲ ಕುಲವೆಂದು ಹಲುಬಿದರೆ ಆ ದೇವ ದೇವನು ಹಲ್ಲು ಮುರಿಯುವನು ನಿನ್ನನ್ನು. ಮೃಗ ನಾಭಿಯಲ್ಲಿ ಹುಟ್ಟಿದ ಕಸ್ತೂರಿ ಶ್ರೇಷ್ಠವಲ್ಲವೇ? ಕೆಸರಿನಲಿ ಹುಟ್ಟಿ ಬೆಳೆದ ಕಮಲ ಶ್ರೇಷ್ಠವಲ್ಲವೇ? ಮಾಂಸಮಯ ಕೆಚ್ಚಲಲ್ಲಿ ಹರಿದುಬರುವ ಹಾಲು ಪವಿತ್ರವಲ್ಲವೇ? ವ್ಯರ್ಥ ಉಪಮಾನಕೊಟ್ಟು ಅಪಮಾನಕ್ಕೆ ಗುರಿಯಾಗದಿರು. ಪವಿತ್ರರಾದ ಇವರಿಗೆ ದೇವಮಂದಿರದಲ್ಲಿ ಪ್ರವೇಶಕೊಡುವದು ಭಾರತಿಯರ ಪರಮ ಕರ್ತವ್ಯ.

**ದೇವದಾಸ**— (ಪ್ರ) ಇಂದುಧರಾ! ಈ ಅಸ್ಪೃಶ್ಯರನ್ನು ದೇವ ಮಂದಿರದಲ್ಲಿ ಪ್ರವೇಶ ಮಾಡಿಸದಿರು. ಈ ಕೀಳುಜಾತಿಯಮೇಲೆ ಪ್ರೇಮ ಮಾಡದಿರು. ಧರ್ಮದಂತೆ ನಡೆ.

**ಇಂದುಧರ**— ತಾತಾ! ವಿಶಾಲ ವಿಶ್ವದಲಿ ಹುಟ್ಟಿಬೆಳೆದ ಮಾನವರಮೇಲೆ ಪ್ರೇಮವಿದೆ. ಪಾಪಕರ್ಮದಲಿ ಪ್ರೇಮವಿಲ್ಲ. ಸತ್ಯಸಂಪತ್ತಿನ ಪ್ರೇಮವಿದೆ. ಜಾತಿಯ ಹುಚ್ಚು ಭಾರತದಲ್ಲಿ ಪ್ರಚಂಡ ಹಿಂಸಾವಾದವನ್ನು ಎಬ್ಬಿಸಿ ಮುಖಂಡರ ಮನ ನೋಯಿಸುತಿದೆ. ಧರ್ಮಯಾವದು?

**ಪದ**

ದಯವಿಲ್ಲದ ಧರ್ಮ ದಾವುದಯ್ಯಾ
ದಯವೇಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯ ನಂತನಲ್ಲ ದೊಲ್ಲನಯ್ಯ॥

ಎಂದು ಮಹಾತ್ಮಾ ಬಸವಣ್ಣನವರು ಧರ್ಮದ ವಿಷಯವಾಗಿ ತಮ್ಮ ಅಮರಸಂದೇಶ ಬೀರಿ ಜಾತಿಯ ವಾದವನ್ನು ಬಗ್ಗುಬಡಿದಿದ್ದಾರೆ. ಪ್ರತಿ ಮಾನವರ ದೇಹವು ದೇವಾಲಯ. ಅದರಲ್ಲಿದೆ ಪರಮಾತ್ಮನ ನಿಜಸ್ಥಾನ ಮಹದೀಶ್ವರನ ಮಂದಿರದಲ್ಲಿದೆ ಮಾನವರೆಲ್ಲರಿಗೂ ಸನ್ಮಾನ! ಪತೀತರೆಂದು ದೇವಮಂದಿರದ ಪ್ರವೇಶಕ್ಕೆ ತಡೆಮಾಡದಿರು ತಾತಾ!

**ಶಿಲಾಕಾಂತೆ—** ಇಂದುಧರ ಜಾತಿಗಳು ಇಂದು-ನಿನ್ನಿನವು ಅಲ್ಲ. ಅನಾದಿಕಾಲದಿಂದ ಬಂದವು. ಶೂದ್ರರಿಗೆ ದೇವಮಂದಿರದಲ್ಲಿ ಪ್ರವೇಶವಿಲ್ಲೆಂಬುದು ಶಾಸ್ತ್ರಸಮ್ಮತ. ವೇದಾಗಮದ ಮತ.

**ಇಂದುಧರ—** **ಪದ**

ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತಿದೆ.
ವೇದ ಘನವೆಂಬೆನೆ ಪ್ರಾಣವಧೆಯ ಹೇಳುತಿದೆ.
ಸ್ಮೃತಿ ಘನವೆಂಬೆನೆ ಮುಂದಿಟ್ಟು ಅರಸುತಿದೆ.
ಎಲ್ಲೆಲ್ಲಿಯೂ ನೀನಿಲ್ಲದಕಾರಣ.
ತ್ರಿವಿಧ ದಾಸೋಹದಲಲ್ಲದೆ ಕಾಣಬಾರದು
ಕೂಡಲಸಂಗಮದೇವಾ||

ಮಹಾತ್ಮಾ ಬಸವಣ್ಣನವರು ವೇದ–ಸ್ಮೃತಿ–ಶಾಸ್ತ್ರ ನಂಬಿ ಭ್ರಾಂತಿಗೆಟ್ಟು ಮಾತಾಡುವವರಿಗೆ ಬುದ್ಧಿಯನ್ನು ಹೇಳಿದ್ದಾರೆ. ಹಿರಿಯರಾದ ನೀವು ಮಮತೆಯಿಂದ ಮಂದಿರದ ಪ್ರವೇಶಕ್ಕೆ ಅವಕಾಶಕೊಟ್ಟು ಕಾಪಾಡಿರಿ ಈ ಬಡಜೀವಿಗಳನ್ನು.

**ಜೀವನ—** ಪೂಜ್ಯರೇ! ಮಹಾತ್ಮಾ ಬಸವಣ್ಣ, ಬುದ್ಧದೇವ, ಪೈಗಂಬರ, ಮಹಾವೀರಸ್ವಾಮಿ, ವಿವೇಕಾನಂದರು ದಿವ್ಯ ವೇದಿಕೆಯ ಮೇಲೆ ನಿಂತು ದೇವನು ಒಬ್ಬನೇ ಮಾನವರೆಲ್ಲರೂ ಸಮಾನರು ಎಂದು ಹೇಳಿದ್ದಾರೆ. ಸ್ಪೃಶ್ಯಾಸ್ಪೃಶ್ಯ ಭೇದಭಾವ ಮಾಡಬಾರದೆಂದು ಹೇಳಿದ ಪೂಜ್ಯ ಗಾಂಧೀಜಿಯವರ ಅಮರಸಂದೇಶ ನಿಮ್ಮ ಹೃದಯಕ್ಕೆ ಮುಟ್ಟಲಿ. ಈ ಬಡವರಮೇಲೆ ದಯೆಯ ದೃಷ್ಟಿಬರಲಿ.

**ನೀಲಾ**— ಎನ್ನ ತಂದೆಗಳೇ ದೇವದರ್ಶನ ಮಾಡಿಸಿ ನನ್ನ ತಮ್ಮನ ಜೀವ ಉಳಿಸಿರಿ ನಿಮ್ಮ ಪಾದಕ್ಕೆ ಬೀಳುವೆನು.

**ದೇವದಾಸ**— ನೀಲಾ! ನೀನು ಬಿದ್ದು ಬೇಡಿಕೊಂಡರೂ ದಯ ಬಾರದು. ದೇವದರ್ಶನವಿಲ್ಲ ನಿಮ್ಮ ಜಾತಿಗೆ

**ಇಂದುಧರ**— ತಾತಾ! ಅಸ್ಪೃಶ್ಯರು ಮ ತಾಂ ತ ರ ಹೊಂ ದಿ ಮತ್ತೊಂದು ಧರ್ಮ ಸ್ವೀಕರಿಸಿದರೆ ಆಗ ದೇವದರ್ಶನಕ್ಕೆ ಅವಕಾಶವಿದ್ದೆ ಯಲ್ಲವೇ?

**ದೇವದಾಸ**— ನಿಜ!

**ಇಂದುಧರ**— ಮಾನವನು ಮತಾಂತರ ಹೊಂದಿದರೆ ಮೂಲ ಮತವು ಅಳಿದು ಸ್ಪೃಶ್ಯನಾಗುವನೇ ಅದೇ ದೇಹ, ಅದೇ ಮನಸ್ಸು ಇದು ಹಿಂದುಧರ್ಮ ಹಾಳುಮಾಡುವ ಹೇಸಿವಿಚಾರಾ.

**ಇಂದ್ರಾ**— (ಪ್ರವೇಶ) ಶ್ರೀಗಂಧದ ಮರ ಕಡಿದು ಜಾಲಿಯ ಬೀಜವ ಬಿತ್ತುವದೇ? ಹೊನ್ನು ಬೆಳೆಯುವ ಭೂಮಿಯಲಿ ಎಲೆಗಳ್ಳಿಯ ನಡುವದೇ? ಸುವರ್ಣ ಹಿಂದುಗಳಿಗೆ ಅಸ್ಪೃಶ್ಯರೆಂದು ಹಳಿದು ಮತಾಂತ ರಕ್ಕೆ ಮಾರ್ಗ ಹಾ ಕಿ ಕೊ ಡು ವ ಹಿರಿಯರಾದ ನಿಮಗೆ ಭೂಷಣವೇ? ಪತೀತ-ಪಾವನರೆಂಬ ಭೇದ-ಭಾವ ಬಿಟ್ಟು ಈ ಬಡಜೀವಿಗಳಿಗೆ ಮಹದೀಶ್ವ ರನ ದರ್ಶನ ಮಾಡಿಸಿರಿ.

**ಸುರೇಶ**— ಮುಚ್ಚುಬಾಯಿ ಇಂದ್ರಾ! ದೇವಮಂದಿರದಲಿ ನಿಂತು ಗುರು–ಹಿರಿಯರ ಅಂಜಿಕೆಬಿಟ್ಟು ಸ್ತ್ರೀ ಧರ್ಮವ ಮರೆತು ಅಸ್ಪೃಶ್ಯರ ಬೆನ್ನುಕಟ್ಟಿ ಮಾತಾಡಿ ಮನ ನೋಯಿಸದಿರು ಎಚ್ಚರಿಕೆ!

**ಇಂದ್ರಾ**— ತನುವಿನಲಿ ಹುಸಿತುಂಬಿ, ಮನದಲಿ ವಿಷತುಂಬಿ ಮಾನವರಲ್ಲಿ ಮೇಲು–ಕೀಳು ಎಂದು ಮಹಧೀಶ್ವರನಮುಂದೆ ಹೇಳುವ ಹಿರಿಯರನು ಎಚ್ಚರಿಸಲು ಬಂದಿರುವೆ ಅಣ್ಣಾ! ಜಾತಿಯತೆಯ ಬೇಗೆಯಿಂದ ಭಾರತಮಾತೆ ಕೋಪಿಸಿಗೊಂಡು ಶಪಿಸುತ್ತಿರುವಳು ಅವಿವೇಕಿಯಾದ

ನಿಮ್ಮನ್ನು. ಮಾನವರೆಲ್ಲರೂ ಒಂದು ಎಂಬ ವಿವೇಕ ಉದಯವಾಗಲಿ ನಿಮ್ಮ ಮನದಲಿ ಇಂದು.

**ದೇವದಾಸ**— ವೇದ-ಶಾಸ್ತ್ರಗಳ ಸಮ್ಮತವಾದ ಅಸ್ಪೃಶ್ಯರು ಕೀಳರು, ಶೂದ್ರರು, ಚಾಂಡಾಲರು, ದೇವದರ್ಶನಕ್ಕೆ ಅಪಾತ್ರರು. ಇಂದ್ರಾ! ಹಿರಿಯರ ಸಮ್ಮುಖದಲ್ಲಿ ಜಾತಿಯ ಹಿರಿಮೆಯನ್ನು ಮರೆತು ಮಾತಾಡುವದು ಉಚ್ಚ ಕುಲದ ಕುಮಾರಿಯಾದ ನಿನ್ನ ಕರ್ತವ್ಯವಲ್ಲ.

**ಇಂದ್ರಾ**— ಮಾನವೀಯತೆಯ ಅರಿವನ್ನು ಜನತೆಗೆ ಮಾಡಲು ಭಾರತನಾರಿಯರ ಹೊಣೆ ಹಿರಿದಾಗಿದೆ. ಜಾತ್ಯಾತೀತ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಕುಮಾರಿಯರ ಕರ್ತವ್ಯ ಮೇಲಾಗಿದೆ ತಂದೆ! ಮತದಮೋಹ ಮೆತ್ತಿದ ನಿಮ್ಮ ಮೆದುಳಿಗೆ ಮಾನವಧರ್ಮದ ಬೆಳಕನ್ನು ನೀಡಿ ಅನಾಥರಿಗೆ ಮಂದಿರದ ಪ್ರವೇಶಮಾಡಲು ನಿಂತಿರುವೆ ಹಿರಿಯರಾದ ನಿಮ್ಮಮುಂದೆ.

**ಇಂದುಧರ**— ತಾತಾ! ವೇದಾಗಮಗಳು ಮಾನವರಲ್ಲಿಯ ಭೇದವನ್ನು ಬೋಧಿಸಿಲ್ಲ. ವೇದಗಳಿಂದ ಹುಟ್ಟಿದ ಧರ್ಮ ಒಂದು ಅದುವೇ ಹಿಂದುಧರ್ಮ. ಸರ್ವಜೀವಿಗಳನ್ನು ದಯಾದೃಷ್ಟಿಯಿಂದ ಕಾಣುವದೇ ಇದರ ಸಾರ. ಹೀಗಿದ್ದು ನೂರಿನ್ನೂರು ಜಾತಿಗಳೆಂದು ಕಲ್ಪಿಸಿ ಸ್ವತಂತ್ರ ಭಾರತದ ಕೀರ್ತಿಗೆ ಕಲಂಕ ಹಚ್ಚಬೇಡಿರಿ. ದೀನದಲಿತರಿಗೆ ದೇವಮಂದಿರದಲಿ ಪ್ರವೇಶಕೊಟ್ಟು ಅಸ್ಪೃಶ್ಯನಿವಾರಣೆಯ ಮಹತ್ಕಾರ್ಯ ಮಾಡಬೇಕೆಂದು ಬೇಡುವೆ.

**ಸುರೇಶ**— ಬೆಳಕು-ಕತ್ತಲೆಗಳ ಭೇದವಿಲ್ಲ. ಉಚ್ಚ-ನೀಚಕುಲದ ತಿಳಿವಿಲ್ಲ. ಸ್ಪೃಶ್ಯ-ಅಸ್ಪೃಶ್ಯರ ಭೇದಭಾವ ಇವನಿಗಿಲ್ಲ. ಈ ಹೊಲೆಯರನ್ನು ದೇವಮಂದಿರದ ಪ್ರವೇಶಮಾಡಿಸಲು ನಿಂತಿಹನು ಇಂದುಧರನು.

**ಶಿಲಾಕಾಂತ**— ದೇವದಾಸರೇ ಇಂದುಧರನ ಬೆಂಬಲದಿಂದ ದೇವದರ್ಶನದ ಬಲತ್ಕಾರ ಮಾಡುವರು ಜೀವನ-ನೀಲೆಯರು. ಇವರನ್ನು ಹೊಡೆದು ಹೊರಗಟ್ಟಬೇಕು.

**ಜೀವನ**— ಪೂಜ್ಯರೇ! ಹೊಡೆಯಿರಿ. ಕಲ್ಲಿನಿಂದ ಒಗೆದು ಕೊಲ್ಲಿರಿ. ನಾವು ಹೊಲೆಯ ಧರ್ಮವ ಬಿಟ್ಟು, ಮುಸಲ್ಮಾನ ಕ್ರೈಸ್ತರಾದರೆ ದೇವ ಮಂದಿರ ಪ್ರವೇಶ. ಆಗ ಕಳಚುವದು ನಮ್ಮ ಅಸ್ಪೃಶ್ಯ ಕವಚ, ಇದಾವ ಸಮಾಜದ ಮೋಸದಬೀಡು! ಪುಸಿಯುನೆಲೆ!! ಜಾತಿಯ ಹುತ್ತು!! ಸ್ವಾರ್ಥ ದಗತ್ತು! ದೇವಾ ನೀನೇ ರಕ್ಷಿಸು ಈ ಅನಾಥರನು.

**ಪದ**

ರಾಗ-ಪಿಲ್ಲು ತಾಳ-ತ್ರಿವಿಟ

ದೇವಾ ದಯಾನಿದೆ। ಕಾಯುವದೆನ್ನನು ಮಾಯಾ
ಮೋಹವ ನೀನು। ನೀನೆನ್ನಯ ಕುಲಭಲ ಭ್ರಾಂತಿಯು
ಕಲಿಯುಗದಲಿ ಬಹು। ನೆಲೆ ನಿಂತಿಹುದು ಸಲುಹೈ ಕರುಣೆ ॥೧॥

**ಶಿಲಾಕಾಂತ+ಸುರೇಶ**— ಹೊಡೆಯಿರಿ ಚಿಮ್ಮಿರಿ ಈ ಪಾಪದ ಪಿಂಡವನ್ನು. (ಕೂಸನ್ನು ಚಿಮ್ಮಿ ಹೋಗುವರು)

**ಮಲ್ಲವ್ವ**— (ಕೂಸು ಮುಟ್ಟಿ) ಅಯ್ಯೋ! ಮಗು ಮಾಯವಾ ಯಿತು. ನನ್ನ ಜೀವಜ್ಯೋತಿ ನಂದಿತು ಮಾಧು! ಈ ಕೀಳು ಬಾಳು ಬೇಸ ರಾದಿತೆ ದೇವದರ್ಶನ ಬೇಡವೆಂದು ಕಣ್ಣು ಮುಚ್ಚಿದಿಯಾ? ಕುಲಜರು ನಿನ್ನ ನ್ನು ಕೊಂದರೆ ಅಮ್ಮಾ! ಎಂಬ ನಿನ್ನ ಕೂಗು ನನ್ನ ಹೃದಯ ಹಿಂಡುತಿದೆ. ಮಾಧು ಕಡೆಗೊಮ್ಮೆಯಾದರೂ ನೋಡು. ಇಲ್ಲ! ಕುಲಜರ ಎದೆ ಕಲ್ಲು! ದೀನರ ಸೊಲ್ಲು!! ಕೇಳದ ದೇವರು ಕಲ್ಲು! ದೇವಾಲಯಮುಚ್ಚಿರಿ. ಮಾನ ವರ ಕೈಗೂಸಾದ ದೇವರನ್ನು ಒಳಗಿಟ್ಟು ಕೀಲಿಹಾಕಿರಿ ದೇವರು ಬೇಡ. ದೇವರದಯ ಬೇಡ. ದೇವರು ಇಲ್ಲ. ಎಲ್ಲಿ! ಮಾಧೂ ಎಲ್ಲಿ! (ಹೋಗುವಳು)

**ನೀಲಾ**— ಅಮ್ಮಾ! ಅಮ್ಮಾ! (ಹೋಗುವಳು)

**ಜೀವನ**—(ಕೂಸನ್ನು ಹಿಡಿದು) ಮಾಧು! ಕಣ್ಣು ಮುಚ್ಚಿದಿಯಾ? ಈ ಹೊಲೆಯಜಾತಿಯ ಹೇಸಿ ಜೀವನ ಸಾಕೆಂದು ಮೌನ ತಾಳಿದಿಯಾ? ಹಿಡಿಸಲಾರದ ದುಃಖ ಒತ್ತ್ರಡಿಸಿ ಬರುತಿದೆ. ಹೃದಯದ ಕಿಚ್ಚು ಕಾಯು ಸುಡುತಿದೆ. ದೇವಾ! ನನ್ನನ್ನೇಕೆ ಹುಟ್ಟಿಸಿದೆ ಈ ಹೀನ ಕುಲದಲ್ಲಿ. ಅಂತ್ಯ

ಜರ ಕೊಲೆ ನಿನ್ನಮುಂದೆಯಾದರೂ ನಿನಗೆ ಕರುಣೆಯಿಲ್ಲ. ದೇವಾ! ನೀನು ದಯಾಳು. ಅಂತ್ಯಜರ ಕೊಲೆ ಕಣ್ಣಾರೆ ಕಂಡರೂ ಕಾಣದ ಕರುಣಾಳು! ಮಾಧು ನನ್ನನ್ನು ಕೈಮಾಡಿ ಕರೆಯುವಿಯಾ? ಹಾ! ಬರುವೆ ನಾನು ಬರುವೆ! (ಹೋಗುವನು)

ಪರದೆ ಬೀಳುವದು

**ಮಲ್ಲವ್ವ**— (ಹುಚ್ಚಾಗಿಹಳು) ದೇವನೆಲ್ಲಿ! ಎನ್ನ ಮಾಧು ಎಲ್ಲಿ!! ಇಲ್ಲ! ಇಲ್ಲಿಯೂ ಇಲ್ಲ! ಮಾಧು ಹೋಗದಿರು ನಿಲ್ಲು! ನನ್ನನ್ನು ಕರೆ ದೊಯ್ಯು ಒಬ್ಬಳನ್ನೇ ಬಿಟ್ಟು ಹೋಗದಿರು. (ನಗು) ನಿಲ್ಲಲಾರೆಯಾ? ನನಗಂಜಿ ಹೋಗುವಿಯಾ? ಹೋಗು ನಾ ಬರುವೆ ನಿನ್ನಹಿಂದೆ! (ಕೋಪ ದಿಂದ) ಕಿಚ್ಚು! ಕುಲದ ಕಿಚ್ಚು!! ಕಿಚ್ಚನೆ ಮೆಟ್ಟಿ ಕುಣಿದಾಡಿ ಹೋಗುವೆ ಮಾಧೂನಲ್ಲಿಗೆ ನಿಲ್ಲು! ನಿಲ್ಲು!! ಮಗು! (ಹೋಗುವಳು)





## ೨ ನೇ ಪ್ರವೇಶ

ಸ್ಥಳ:- ಜೀವನನ ಮನೆ

**ಜೀವನ**— ಪದ

ರಾಗ- ಮಿಶ್ರಧನ್ಯಾಶಿ ತಾಳ- ತ್ರಿವಟ

ನೀ ಕರುಣಿ ನೋಡಿದೆನೆನ್ನ ಬಾಳು! ಸಾಕು ಸಾಕೆನ್ನ
ಜನುಮದ ಗೋಳು! ಕಾಕು ಮಾನವರ ಭೀಕರಾಕೃತಿಯ
ಸೋಕಿಯನ್ನಯ ಮಮತೆಯ ನೂಕಿತು ||೧||

ಆತ್ಮಹತ್ಯ! ಎನ್ನ ಚಿಕ್ಕಮ್ಮನ ಆತ್ಮಹತ್ಯ!! ಧರ್ಮದ ದುರಾಭಿಮಾನದಿಂದ ಮಾನವರು ಮಾನವರನ್ನು ಕೊಲೆಮಾಡುತ್ತಿದ್ದಾರೆ. ಏನೂ ಇಲ್ಲದ ಈ ಜಗತ್ತಿನಲ್ಲಿ ಬಾಳಿ ಬದುಕಿ ಮಾಡುವದಾದರೂ ಏನು? ದೇಹವ ನೀಗಿ ದೇವರಿದ್ದಲ್ಲಿಗೆ ಹೋಗಿ ದೂರನ್ನು ಹೇಳುವೆ.

**ಇಂದುಧರ**— (ಪ್ರವೇಶ) ಜೀವನಾ! ಎಲ್ಲಿಗೆ?

**ಜೀವನ**— ಸಾವು ಕೈಮಾಡಿ ಕರೆವಲ್ಲಿಗೆ! ಜಾತಿಯ ತಾರತಮ್ಯವಿಲ್ಲದ ದೇವನಲ್ಲಿಗೆ.

**ಇಂದುಧರ**— ಜೀವನಾ! ನಿನಗಾದ ದುಃಖ! ನಿನಗಾದ ವೇದನೆ ನನಗೂ ಆಗಿದೆ. ಇಬ್ಬರೂ ದೇವನಲ್ಲಿಗೆ ಹೋಗಿ ಧರ್ಮದ ದೂರು ಹೇಳುವಾ (ಅಪ್ಪಿಕೊಳ್ಳುವನು)

**ಜೀವನ**— ಮುಟ್ಟದಿರು! ಮುಟ್ಟಲಾರದ ಕುಲದಲ್ಲಿ ಹುಟ್ಟಿ ಮರಣಕ್ಕೆ ಸಿದ್ಧನಾದ ಈ ಪಾಪಿಯನು ಮುಟ್ಟದಿರು.

**ಇಂದುಧರ**— ಜೀವನಾ ಮುಟ್ಟಬೇಡವೆಂದು ಹೇಳಿದರೆ ಮನ ನೋಯುವದು. ತನುವು ಕರಗಿ ನೀರಾಗುವದು. ನಾನಿನ್ನ ಬಂಧುವಲ್ಲವೇ?

**ಜೀವನ—** ನಾನು ನನ್ನವರೆನ್ನುವವರಿಲ್ಲದಿರುವಾಗ ಬಂಧುವೆಂದೆನ್ನುವದು ಭ್ರಮೆ! ನನ್ನ ದೇಹವೇ ಕ್ಷಣದಲಿ ಮಾಯವಾಗುವಾಗ ಇನ್ನಾವ ಬಂಧು!!

**ಇಂದುಧರ—** ಜೀವನಾ! ಇದಾವ ನಿರಾಶೆಯ ನುಡಿ!

**ಜೀವನ—** ಶರೀರದ ಆಶೆ ತೊರೆದಾಗ ಇನ್ನಾವ ಆಶೆ! ಈ ದೇಹ ಪಾಪದ ಪಂಜ. ಮುಟ್ಟಿದರೆ ಮೈಲಿಗೆಯಾಗುವ ಮಲ!! ನಿಂದೆಯ ತವರು! ಕಷ್ಟದ ಹುತ್ತು. ಇದು ಅಳಿದಾಗಲೇ ಶಾಂತಿ!!!

**ಇಂದುಧರ—** ಮಾನವನು ಕಷ್ಟದಲಿ ಶಿಲುಕಿ ದಿಕ್ಕುಗಾಣದವನಾದರೂ ಆತ್ಮಹತ್ಯೆಕ್ಕೆ ಅಣಿಯಾಗುವದು ಹೇಡಿಗಳ ಕರ್ತವ್ಯ. ಅಸ್ಪೃಶ್ಯ ನಿವಾರಣೆಗಾಗಿ ದೇಹ ಮುಡುಪಿರಿಸಿದ ನೀನು ಆಶೆತೊರೆದರೆ ನಿನ್ನ ಉದ್ದೇಶ ಕೊನೆಗಾಣುವದೆಂತು? ಆತ್ಮಹತ್ಯ ಅಘೋರ ನರಕ.

**ಜೀವನ—** ನಿನ್ನ ಅನುಭವದ ನುಡಿಗಳು ಅರುಹನ್ನು ನೀಡಿದವು. ನಿಮ್ಮ ಆದೇಶದಂತೆ ನಡೆವೆ. ಆದರೆ ಅಸ್ಪೃಶ್ಯ ನಿವಾರಣೆ ಅಸಾಧ್ಯ!

**ಇಂದುಧರ—** ಆದರೆ ಎಂಬ ಸಂದೇಹಬೇಡ? ಇದು ಜನತಾ ಸರಕಾರ. ಅಸ್ಪೃಶ್ಯತಾ ನಿವಾರಣ ಕಾರ್ಯವನ್ನು ಕೈಕೊಂಡಿದೆ. ನವಜೀವನದಲ್ಲಿ ಮಾನವ ಸಮಾನತೆಯ ಪ್ರವಾಹವು ಹರಿಯುತಿದೆ. ಹಳೆಯ ಮೆದುಳಿಗೆ ಹಿಡಿದಿದೆ ಜ್ಯಾತಿಯ ಹುಚ್ಚು. ಅದನ್ನು ಬಿಡಿಸುವ ಪ್ರಯತ್ನ.

**ಇಂದ್ರಾ—** (ಪ್ರವೇಶ) ಅದಾವ ಪ್ರಯತ್ನ ಇಂದುಧರ.

**ಇಂದುಧರ—** ಇಂದ್ರಾ! ಗೆಳೆಯ ಜೀವನನ ಮನವು ಉಚ್ಚಕುಲಜರ ದಬ್ಬಾಳಿಕೆಯಿಂದ ಕಳವಳಗೊಂಡಿದೆ. ಉಚ್ಚ-ನೀಚ, ಸ್ಪೃಶ್ಯ-ಅಸ್ಪೃಶ್ಯ ಎಂಬ ಸಮಾಜದ ಅಸಮಾನತೆಯನ್ನು ನಿವಾರಿಸಲು ಇಂದು ನಾವೆಲ್ಲರೂ ಒಂದಾಗೋಣ ಅದಕ್ಕಾಗಿ ದುಡಿಯೋಣ.

**ಇಂದ್ರಾ—** ಅಸ್ಪೃಶ್ಯ ನಿವಾರಣೆ ಎಂದು ನುಡಿದು ಮರೆಯಲ್ಲಿ ತಮ್ಮ ಮಾರ್ಗ ತುಳಿಯುವ ಸಮಾಜದ ಢಾಂಬಿಕತನದ ಸೋಗು ದೂರಾ

ಗಬೇಕು. ಮಾನವರೆಲ್ಲರೂ ಒಂದು ಎಂದು ಮಾತು ಹೇಳುವದಕ್ಕಿಂತ ಈ ಕಾರ್ಯ ಕೃತಿಗಿಳಿಯಬೇಕು. ಕನ್ನಡ ಕುಲೋದ್ಧಾರಕ ಮಹಾತ್ಮಾ ಬಸವಣ್ಣನವರು ಉಚ್ಚ ನೀಚ ಭೇದವನು ಹೊಡೆದುಹಾಕಿ ಅವರ ಜೀವನ ದಲಿ ಸಮರಸವಾಗಿ ಹರಿಜನರಿಗೆ ಹರನಾಗಿತೋರಿ ಮಾನವ ಕುಲವನ್ನೇ ಉದ್ಧರಿಸಿದರು. ಅವರ ತತ್ವದ ಸೂತ್ರಹಿಡಿದು ಈ ಕಾರ್ಯ ಸಾಧಿಸುವಾ.

**ಇಂದುಧರ—** ಇಂದ್ರಾ! ನೀನೆನಗೆ ಗುರು. ನಿಮ್ಮಂಥ ಮಹಿಳೆ ಯರಿಂದಲೇ ಭಾರತದ ಆದರ್ಶ ಪ್ರಭೆಯು ವಿಶ್ವ ಬೆಳಗುತಿದೆ. ಅಸ್ಪೃಶ್ಯರು ಸಮರಸವಾಗಿ ಮಾನವರು ಒಂದು ಎಂಬ ತತ್ವ ತಿಳಿಸುತ್ತ ತಿರುಗುವೆ. ಇದೆನ್ನ ನಿರ್ಧಾರ!

**ಇಂದ್ರಾ—** ಅಂದೇ ಅಸ್ಪೃಶ್ಯೋದ್ಧಾರ!

**ಜೀವನ—** ಇದುವೇ ನನ್ನ ಸಮಾಜದ ಉದ್ಧಾರ!



# ೩ ನೇ ಪ್ರವೇಶ

ಸ್ಥಳ:— ಶಿಲಾಕಾಂತರ ಮನೆ

**ಕಲ್ಲುಬಾಯಿ**— ಏನ್ರಿ! ಇಂದೇಕೆ ಮನೆಗೆ ಬರಲು ಹೊತ್ತಾಯಿತು?

**ಶಿಲಾಕಾಂತ**— ಕಲ್ಲು! ನೀಚ ಜಾತಿಯ ಜೀವನ–ನೀಲೆಯರು ಮಹದೀಶ್ವರನಮುಂದೆ ಕರ್ಪುರಾರತಿ ಮಾಡಲು ಬಂದಿದ್ದರು. ಅವರಿಗೆ ಚನ್ನಾಗಿ ಕೈತೋರಿಸಲು ಹೊತ್ತಾಯಿತು.

**ಕಲ್ಲುಬಾಯಿ**— ಪಾಪ! ಆ ಬಡವರು ಭೂಮಿಯಮೇಲೆ ಬಾಳ ಬಾರದೆಂಬುದು ನಿಮ್ಮ ಆಶೆಯೇ?

**ಶಿಲಾಕಾಂತ**— ಆ ನೀಚರ ಮಾತೆತ್ತಿದರೆ ತಲೆ ಬಿಸಿಯಾಗುತ್ತಿದೆ.

**ಕಲ್ಲುಬಾಯಿ**— ತಲೆ ಬಿಸಿಯಾದರೆ ತಣ್ಣೀರಿನಲ್ಲಿ ತಲೆ ಮುಳುಗಿಸಿದರಾಯಿತು.

**ಶಿಲಾಕಾಂತ**— ಕಲ್ಲು! ಹಾಸ್ಯಮಾಡಬೇಡ ಜಾತಿಯ ವಿಷಯವಾಗಿ ನಿನ್ನ ಮನಸ್ಸೇ ಕಲ್ಲಾಗಿದೆ. ಅಂತೆ ನಿನಗೆ ಕಲ್ಲು ಅಂತ ಹೆಸರಿಟ್ಟಿದ್ದಾರೆ. ಹೆಸರಿಗೆ ತಕ್ಕಂತೆ ಇರುತ್ತಿ.

**ಕಲ್ಲುಬಾಯಿ**— ನೀವು ಹೇಳುವದೇಕೆ ಜಾತಿಯ ವಿಷಯವಾಗಿ ಮೊದಲೇ ನನ್ನ ಮನಸ್ಸು ಕಲ್ಲಾಗಿದೆ.

**ಶಿಲಾಕಾಂತ**— ಥೂ! ಥೂ!! ಮತ್ತು ಆದೇನೆ? ಹಿಂದುಳಿದವರನ್ನು ಮುಂದೆತರಬೇಕಂತ ವಾದಿಸುವವರ ಕೂಡ ಮಾತೇ ಬೇಡಾಗಿದೆ. ಕಲ್ಲು! ವಿಚಾರಮಾಡು ಹೊಲೆಯರು ಪೂರ್ವಕಾಲದಿಂದಲೂ ಮುಟ್ಟಿಸಿಕೊಳ್ಳದ ಮಾನವರು. ತಿಳಿಯಿತೋ ಇಲ್ಲೋ!

**ಕಲ್ಲುಬಾಯಿ**— ಹಿಂದೊಮ್ಮೆ ಮಹಾತ್ಮಾ ಬಸವಣ್ಣನವರು ಉಚ್ಚ ಜಾತಿಯ ಮಧುವರಸನ ಮಗಳನ್ನು ಮಾದರ ಹರಳಯ್ಯನ ಮಗನಿಗೆ ಕೊಟ್ಟು ಶರೀರ ಸಂಬಂಧಮಾಡಿ ಜಾತಿ ನಿರ್ಮೂಲನಕ್ಕಾಗಿ ಹೋರಾಡಲಿಲ್ಲವೇ?

**ಶಿಲಾಕಾಂತ**— ಥೂ! ಥೂ!! ಹೀಗೆ ಮಾಡಿದ್ದಕ್ಕೆ ಬಿಜ್ಜಳರಾಯನು ಮಾದರ ಹರಳಯ್ಯನ ಕಣ್ಣು ಕೀಳಿಸಲಿಲ್ಲವೇ?

**ಕಲ್ಲುಬಾಯಿ**— ಜಾತಿ ಹುಚ್ಚಿನಿಂದ ಶಿವಶರಣರ ಕಣ್ಣು ಕೀಳಿಸಿದ ಬಿಜ್ಜಳನನ್ನು ಶಿವಶರಣರು ಯಮಲೋಕಕ್ಕೆ ಅಟ್ಟಲಿಲ್ಲವೇ?

**ಶಿಲಾಕಾಂತ**— ಮಹಾತ್ಮಾ ಬಸವಣ್ಣನವರು ಅಸ್ಪೃಶ್ಯ ನಿವಾರಣೆಗಾಗಿ ಹೋರಾಡಿದರೂ ಶೂದ್ರರು ಶೂದ್ರರಾಗಿಯೇ ಉಳಿದಿದ್ದಾರೆ. ಉಚ್ಚ ಕುಲಜರು ಉಚ್ಚರಾಗಿದ್ದಾರೆ. ಯಾವ ಬದಲಾವಣೆಯೂ ಆಗಿರುವದಿಲ್ಲ. ಈಗಿನ ಸುಧಾರಕರ ಮಾತಿಗೆ ಮರೆಹೋಗಿ ವ್ಯರ್ಥವಾಗಿ ವಾದಿಸಬೇಡ.

**ಕಲ್ಲುಬಾಯಿ**— ಹಾಗೆನ್ನಬೇಡಿರಿ. ನಿಮ್ಮಂಥ ಅವಿಚಾರಿಗಳಿಂದಲೇ ಮಹಾತ್ಮರ ತತ್ವ ಕೃತಿಗಳಿಗೆ ಮಸಿ ಹಚ್ಚಿ ಹಿರಿ ಕುಲಜರೆಂಬ ಹೆಮ್ಮೆಯಿಂದ ಸುಳ್ಳುಶಾಸ್ತ್ರ ಹೇಳುತ್ತ ಹೊರಟಿದ್ದರಿಂದಲೇ ಆ ಸಮಾಜಕ್ಕೆ ಪೆಟ್ಟು ಬಿದ್ದಿದೆ. ನಿಮ್ಮಂಥ ಬುದ್ಧಿಹೀನರಿಗೆ ಅಸ್ಪೃಶ್ಯ ನಿವಾರಣೆ ಕಾಯ್ದೆ ಗದೆ ಎತ್ತಿದೆ. ಎಚ್ಚರದಿಂದ ಮಾತಾಡಿರಿ.

**ಶಿಲಾಕಾಂತ**— ನೀನು ಹೇಳುವದಾದರೂ ನಿಜ! ಈ ಕಾಯ್ದೆ ಕಾನೂನುಗಳಿಂದ ನಮ್ಮಂಥವರ ಆಟ ನಡೆಯುವದೇ ಇಲ್ಲ. ಕಲ್ಲು ನಿನ್ನಂತೇ ಆಗಲಿ ಸಾಕು ವಾದಬೇಡ.

**ಕಲ್ಲುಬಾಯಿ**— (ಸ್ವಗತ) ನೋಡಿದಿರಾ! ಕಾಯ್ದೆಯು ಬುದ್ಧಿಹೀನರನ್ನು ಬುದ್ಧಿವಂತರನ್ನಾಗಿ ಮಾಡುತ್ತದೆ. ಅಂತೇ ನಮ್ಮ ದಯಾಳು ಸರಕಾರ ಹಿಂದುಧರ್ಮದ ಉದ್ಧಾರಕ್ಕಾಗಿ ಹಗಲಿರುಳು ಪರಿಶ್ರಮ ಪಡುತ್ತಿದೆ. ತನು–ಮನ–ಧನದಿಂದ ನಾವೆಲ್ಲರೂ ಸೇವೆ ಸಲ್ಲಿಸಿದರೆ ನಮ್ಮ ದೇಶ ಆದರ್ಶವಾಗುವದು. (ಪ್ರಕಾಶ) ಇನ್ನುಮೇಲೆ ಜಾತಿಯ ಹುಚ್ಚಾಟ ಬಿಟ್ಟು

ಅಸ್ಪೃಶ್ಯ ನಿವಾರಣೆಯ ಕಾರ್ಯಕ್ಕೆ ನಾವೇ ಮೊದಲು ಮುಂದಾಗೋಣ.

**ಶಿಲಾಕಾಂತೆ**— (ಸ್ವಗತ) ಮಾಡುವದೇನು! ಹೊತ್ತುಬಂದಂತೆ ಕೊಡೆ ಹಿಡಿಯಲೇಬೇಕು. (ಪ್ರಕಾಶ) ಕಲ್ಲು! ನಿನ್ನಿಚ್ಛೆಯಂತೆ ಆಗಲಿ ನಡೆ ಹೋಗುವಾ.

**ಕಲ್ಲುಬಾಯಿ**— ಪದ

ಬದುಕು-ಬಾಳ್ವೆ ಬಿಟ್ಟುಕೊಟ್ಟೆ ಬೇಕಾದಗಂಡನ।
ಕೂಡಿಕೊಂಡೆ ನನ್ನೊಳಗೆ ನಾ ತಿಳಿದುಕೊಂಡೆ।
ದುಡಿದ ದುಡ್ಡು ಹರಿಜನ ಸೇವೆಗಾಗಿ ಮುಡುಪಿಟ್ಟೆ
ಇದರಮೇಲೆ ಮನವಾನಿಟ್ಟೆ ಶಿವ ಶಿವ
ಎಂಬ ಹಾದಿ ಹಿಡಿದುಕೊಂಡೆ। ಈ ಭವಕ ತಿರುಗಿ
ಬರದಂತೆ ಮಹದೀಶ್ವರನ ಪಾದ ಹಿಡಿದುಕೊಂಡೆ॥

(ಹೋಗುವಳು)



## ೪ ನೇ ಪ್ರವೇಶ

ಸ್ಥಳ;- ದೇವದಾಸರ ಮನೆ ಸಮಯ:- ಮಧ್ಯರಾತ್ರಿ

**ದಯಾವತಿ—** ಪದ

ರಾಗ- ಜೋಗಿ ತಾಳ- ದಾದರಾ

ವರಗುಣ ಮಹದೀಶ್ವರ। ಪರಮಭಕ್ತಜನ ಬಂಧು।
ಅತಿ ದೀನೆಯಾದೆನಾ। ಅನುತಾಪ ಜಾಲದೊಳು। ಕರುಣವಾ
ತೋರಿ ರಕ್ಷಿಸೋ। ಕರುಣಾಲವಾಲಾ॥

ದೇವಾ! ಈ ನಿನ್ನ ದೀನ ಪುತ್ರಿಯಮೇಲೆ ನಿಷ್ಕರುಣೆಯೇ! ಕರುಣಾಮಯಿ ಎಂದು ಕರೆಯಿಸಿಕೊಳ್ಳುವದು ನಿನಗೆ ಕಲಂಕವಲ್ಲವೇ ಮಮತೆಯ ಮಗುವನ್ನು ಕೊಟ್ಟು ಮಾತೆಯನ್ನು ಮಾಡಿದಾಗ್ಯೂ ಮನಸ್ಸಿನ ಕಳವಳವು ಕಡೆಗೂ ಉಳಿದು ನೀ ಕೊಟ್ಟದ್ದು ಕಾನನದ ಬೆಳದಿಂಗಳೋಪಾದಿಯಲಿ ಪರಿಣಮಿಸಿತು. ದಯಾನಿಧೆ! ಒಡಲಲ್ಲಿ ಉರಿಯ ಮಡಿಸಿಕೊಂಡು ಒಂಟಿಗಳಾಗಿ ಅದಾವ ಸುಖವನ್ನು ಅನುಭವಿಸಲಿ ದೇವಾ! ಎನ್ನನ್ನು ಕರೆದುಕೋ ಇಲ್ಲವೆ ನಾನೇ ಬರುವೆ ಅದನು ಅರಿತುಕೋ.

**ದೇವದಾಸ—** (ಪ್ರವೇಶ) ಏನು ಅಪರಾತ್ರಿಯಲಿ ಅಪಸ್ವರವೇ ಯಾರು?

**ದಯಾವತಿ—** ತಮ್ಮ ಧರ್ಮಪತ್ನಿ ದಯಾಬಾಯಿಯ ಹೊರತು ಮತ್ತಾರು?

**ದೇವದಾಸ—** ಏಕಾಂಗಿಯಾಗಿ ಯಾರಿಗೆ ಕರೆದುಕೋ? ನಾನೇ ಬರುವೆ ಅಂತೋ? ಎಂದು ಕೇಳಿದ್ದು.

**ದಯಾವತಿ—** ಜಗದೀಶನಾದ ಜನ್ಮದಾತನಿಗೆ.

**ದೇವದಾಸ—** ಕಾರಣ!

**ದಯೂವತಿ**— ಎಲ್ಲವೂ ವಿನಾಕಾರಣ.

**ದೇವದಾಸ**— ದಯಾವತಿ! ಹೀಗೇಕೆ ಮಾಡುತ್ತಿರುವಿ.

**ದಯೂವತಿ**— ದಯಾವತಿ! ಅಲ್ಲ!! ನಿರ್ದಯ! ಒಡಲಿನ ಹಸುಳನ್ನು ದಾರಿ ತೋಚದ ಧರ್ಮದ ಮ ಡು ವಿ ನ ಲ್ಲಿ ಕೆಡವಿ ಒಡಲಲ್ಲಿಟ್ಟ ಕಿಡಿಯು ಕೆಂಡವಾಗಿ ಸುಡುವಾಗ ಸಹಿಸಲಾರದೆ ಆ ಸರ್ವೇಶನಿಗೆ ಶಾಶ್ವತ ಸುಖ ಹೊಂದಲು ನಾನೇ ಬರುವೆ ಎಂದು ಕೇಳಿದ್ದು.

**ದೇವದಾಸ**— ದಾರಿ ತೋರಿಸುವ ಧರ್ಮ! ನಿನಗೆ ದಾರಿ ತೋರಿಸದ ಮಡುವಾಗಿ ಪರಿಣಮಿಸಿತೆ?

**ದಯೂವತಿ**— ಮಡುವಲ್ಲ! ಕಡಲಾಗಿ ಕಾಣುತಿಹುದು. ಕಣ್ಮನಗಳು ಕುರುಡಾಗಿ ಮತಿಯು ಮಾಯವಾಗಿ ಗತಿ ಹೊಂದಲು ಹವಣಿಸುವ ನನಗೆ ಈ ಧರ್ಮವು ಕಡಲಲ್ಲದೇ ಮತ್ತೇನು?

**ದೇವದಾಸ**— ಧರ್ಮ! ಮತಿಯನ್ನು ಮಾಯಮಾಡಿ ಕಡಲಾಗಿ ಕಂಡಿತೇ ಹಾಗಾದರೆ ನೀನು ಹೇಳುವ ಧರ್ಮ ಅದಾವುದು?

**ದಯೂವತಿ**— ಅಂಧ ಶ್ರದ್ಧೆಯಲಿ ಹುಚ್ಚರಂತೆ ಗ ತಿ ಯ ನು ಹು ಡು ಕ ಲು ಹೊರಟ ಹಟಮಾರಿಗಳಿಂದ ನಿಮಗೆ ಆ ಧರ್ಮದ ದಾರಿ ತೋರುವದೆಂತು.

**ದೇವದಾಸ**— ದಯಾ! ನಾನು ದಾ ರಿ ಕಾ ಣ ದ ಧರ್ಮ ಹಿಡಿದಿರುವೆನೇ? ಹೇಳು ನಿಜವಾದಧರ್ಮ ಯಾವದು?

**ದಯೂವತಿ**— ಅಜ್ಞಾನಿಗಳಿಗೆ ಅಸಂಭವ ಮಾರ್ಗ! ಸುಜ್ಞಾನಿಗಳಿಗೆ ಸುಲಭವಾದ ಮಾರ್ಗ!! ನಿಜವಾದ ಧರ್ಮ!!!

**ದೇವದಾಸ**— ದಯಾ! ಅಜ್ಞಾನಿಯಾರು? ಸುಜ್ಞಾನಿಯಾರು? ಇದಾವ ನಿನ್ನ ನುಡಿ?

**ದಯೂವತಿ**— ಶಾಂತರಾಗಿ ಕೇಳಿದರೆ ಹೇಳುವೆ. ಅಜ್ಞಾನಿ, ಸುಜ್ಞಾನಿಯ ತಾರತಮ್ಯ.

**ದೇವದಾಸ**— ದಯಾ! ಸಂದೇಹ ಪಡಬೇಡ! ಮನದ ಮಲೀನತೆ ತೊಳೆದು ನಿಜವಾದ ಧರ್ಮ ತೋರಿಸು!

**ದಯಾವತಿ**— ಸ್ವಾಮೀ! ಜಗದುತ್ಪತ್ತಿ ಮೊದಲೋ? ಜಾತಿ ಮೊದಲೋ?

**ದೇವದಾಸ**— ಜಗತ್ತು ಹುಟ್ಟಿದನಂತರ ಜಾತಿಗಳು ಹುಟ್ಟಿದವು.

**ದಯಾವತಿ**— ಜಾತಿಯ ಮೊದಲಿನ ಜಗದ ಸ್ಥಿತಿ ಹೇಳಿರಿ?

**ದೇವದಾಸ**— ತಪ್ತವಾದ ಸೂರ್ಯಗೋಲದಿಂದ ಸಿಡಿದುಬಿದ್ದ ಪೃಥ್ವಿಯಲಿ ಉದ್ಭಿಜ, ಜಲಜವೆಂಬ ಮತ್ತು ಅಂಡಜ, ಪಿಂಡಜವೆಂಬ ಪಂಚಮಹಾಭೂತಗಳ ಸಂಯೋಗದಿಂದ ನಾಲ್ಕು ಪ್ರಕಾರದ ಜೀವರಾಶಿಗಳ ಉತ್ಪತ್ತಿಯಾಯಿತು. ಸಕಲ ಪ್ರಾಣಿಗಳಲ್ಲಿ ಮಾನವಪ್ರಾಣಿ ಶ್ರೇಷ್ಠವೆಂದು ಅದರಲ್ಲಿ ಸ್ತ್ರೀ ಪುರುಷವೆಂಬ ಎರಡೇ ಜಾತಿಗಳೆಂದು ಜಿಜ್ಞಾಸುಗಳಿಂದ ನಿರ್ಣಯಿಸಲ್ಪಟ್ಟಿತು ಇದುವೇ ಜಗದುತ್ಪತ್ತಿ ಇತಿಹಾಸ.

**ದಯಾವತಿ**— ಅಂದಮೇಲೆ ನಾವು ನಡೆಯುವ ಧರ್ಮ ಹುಟ್ಟಿದುದು ಎಂದು?

**ದೇವದಾಸ**— ಮಾನವ ಬಾಳಿ ಬದುಕಲು ಸಮಾಜ ರಚನೆಯಾಯಿತು. ಸಂರಕ್ಷಣೆಗಾಗಿ ನಾಲ್ಕು ವರ್ಣಗಳು ಹುಟ್ಟಿದವು. ಮುಂದೆ ಕಾಯಕವು ಕುಲವಾಗಿ ಕವಲೊಡೆದು ಅನಂತ ಜಾತಿಗಳಾದವು.

**ದಯಾವತಿ**— ಜಾತಿಯನ್ನು ಹುಟ್ಟಿಸಿದವರು ಯಾರು?

**ದೇವದಾಸ**— ಮಾನವರು.

**ದಯಾವತಿ**— ಮಾನವರನ್ನು ಹುಟ್ಟಿಸಿದವರು ಯಾರು?

**ದೇವದಾಸ**— ದೇವರು

**ದಯಾವತಿ**— ಅಂದಮೇಲೆ ಮಾನವಕೃತಿ ಮೇಲೋ ಈಶಕೃತಿ ಮೇಲೋ.

**ದೇವದಾಸ**— ದೇವಕೃತಿ ಮೇಲು.

**ದಯಾವತಿ**— ಮಾನವ ನಿರ್ಮಿತವಾದ ಜಾತಿಗೆ ಮನ್ನಣೆ ಕೊಟ್ಟು ಮಾನವರಲ್ಲಿ ಸ್ಪೃಶ್ಯ-ಅಸ್ಪೃಶ್ಯ ಭೇದ ಭಾವ ಮಾಡುವ ನಾವು ಸುಜ್ಞಾನಿಗಳೋ ದೇವನಿರ್ಮಿತವಾದ ಮಾನವ ಧರ್ಮದ ಉದ್ಧಾರಕ್ಕಾಗಿ ಪ್ರಯತ್ನಿಸುವ ಇಂದುಧರನು ಸುಜ್ಞಾನಿಯೋ?

**ದೇವದಾಸ**— ದಯಾ! ಸುಜ್ಞಾನದ ಸುಜ್ಯೋತಿ ಉದಯವಾಯಿತು. ಅಜ್ಞಾನದಿಂದ ಜಾತಿಗೆಮೆಚ್ಚಿ ಹೊಟ್ಟೆಯ ಮಗನನ್ನು ಮನೆಬಿಟ್ಟು ಅಟ್ಟಿದ ಪಾಪಿ ನಾನು! ಕುಲದ ಛಲದಿಂದ ಬಡಜೀವಿಗಳ ಕಣ್ಣೀರಿನಲಿ ಕೈತೊಳೆವ ನಿರ್ದಯಿ! ಕುಲ ಕುಲವೆಂದು ಕೂಗುತ್ತ ಕತ್ತಲೆಯತ್ತ ಜಾರಿದ ನನಗೆ ನಿಜಧರ್ಮದ ಜ್ಞಾನದೀಪ ಸುಮಾರ್ಗವ ತೋರಿತು. ಬೇಗ ಇಂದುಧರನಲ್ಲಿಗೆ ಹೋಗುವಾ ನಡೆ!

**ದಯಾವತಿ**— ತಮ್ಮ ನಿರ್ಮಲ ಹೃದಯ ಕಂಡೆ! ಆನಂದ ಹೊಂದಿದೆ. ಇಂದುಧರನಲ್ಲಿಗೆ ಹೋಗಿ ಅವನ ನವಜೀವನದಲಿ ಸಮರಸವಾಗುವಾ ನಡೆಯಿರಿ.

**ಪದ**

ದೈಲಾ ವರ್ಜ

**ಗಂ**— ಹರುಷಮಯಾ
**ಹೆಂ**— ಇದೇ ಸಮಯಾ
**ಗಂ**— ಸರಸನೀಡು ನೀ ಪ್ರೀಯಾ
**ಹೆಂ**— ನಿರುತದಿ ನೀಪಿಡಿವ ಕರನಾ



## ೫ ನೇ ಪ್ರವೇಶ

ನೀಲಾ— ಪದ

ರಾಗ– ಚಾಂದ ತಾಳ– ಎಕ್ಕಾ

ಬೇಡುವೆ ಭಾರತ। ಜನನಿ ಪಾಲಿಸು ನೀ। ಮಾಡು।
ದಯದಾನ। ಕುಲಪಾಶ ಹರಿಸೆ। ಅನಾಥರ ಪಾಲಿಸು ನೀ।
ಅಂತ್ಯಜರ ಬಳಗವೆಲ್ಲವನಾ। ಕಾಯೆ ವಿಶ್ವದ ತಾಯಿ।
ಕಾಯೆ ದಯೆತೋರಿಸಿ ॥೧॥

ದೇವಿ! ನಿಶಕ್ತಿ ವಿಶ್ವವನ್ನೇ ಹಿಡಿದು ನಿಲ್ಲಿಸಿದೆ. ವಿನಾಶದತ್ತ ಸಾಗಿರುವ ರಾಷ್ಟ್ರಗಳನ್ನೇ ಶಾಂತಿಮಾರ್ಗದತ್ತಸಾಗಿಸಿದೆ. ಆದರೆ ನಿನ್ನಲ್ಲಿ ಬಾಳಿ ಬದುಕುವ ಕೆಲವು ಕುವರರು ಕೀಳರಾಗಿ ಕೊಳೆಯಲ್ಲಿ ಬಿದ್ದು ಬಳಲುವದು ಆ ನಿನ್ನ ಶಕ್ತಿಗೆ ಕಲಂಕವಿದೆ. ನಿನ್ನ ಕುವರರಲ್ಲಿಯ ಮೇಲು-ಕೀಳು ಎಂಬ ಕಲಂಕ ಕಳೆದು ಕಾಪಾಡು ತಾಯಿ!

**ಸುರೇಶ—** (ಪ್ರವೇಶ) ಕಲಂಕದ ಕಣವಿಲ್ಲ ಕುಮಾರಿ! ನಿನ್ನೆದೆಗೆ ಕಾಣಲಿ ನಿರ್ಮಲ ಛಾಯ.

**ನೀಲಾ—** ಈ ದೀನ ದಲಿತಳಮೇಲೆ ಕಾಮುಕ ಕಣ್ಣೆ!

**ಸುರೇಶ—** ಚೈತನ್ಯಮಯ ವಿಶ್ವದಲ್ಲಿಟ್ಟಿಹನು ಆ ಬೊಮ್ಮ ಕಾಮುಕತೆಯ ಕಣ್ಣನ್ನು! ಮುಕ್ಕಣ್ಣನಿಗುಂಟು ಕಾಮುಕತೆಯಕಣ್ಣು!! ಕಾಮುಕತೆಯ ಕಣ್ಣಿನಿಂದಲೇ ಜಗದುತ್ಪತ್ತಿ!!! ಕಾಮುಕತೆಯ ಕಣ್ಣಿರದಿದ್ದರೆ ಹಾಳು ಬರಡಾಗುತ್ತಿತ್ತು ವಿಶ್ವ! ಕಾಮುಕತೆಯ ಕಣ್ಣಿವೆಗಳು ಬಿಚ್ಚಲಿ ನೀಲಾ!

**ನೀಲಾ—** ಪರನಾರಿಯರ ಶೀಲದ ಕುಲುಮೆಯಲಿ ಕರಗಿ ನೀರಾಗುವದು ಕಾಮುಕತೆಯ ಕಣ್ಣು. ಮುಕ್ಕಣ್ಣನಿಂದ ಹೊರಟ ಉರಿಗಣ್ಣು

ಕಾಮುನನ್ನೇ ಸುಟ್ಟಿತು. ಗುರು-ಹಿರಿಯರ ಸಮ್ಮುಖದಲಿ ಮದುವೆಯ ಮಂಟಪದಲಿ ಬಿಚ್ಚುವವು ಕಾಮುಕತೆಯ ಕಣ್ಣೆವೆಗಳು. ವಧು-ವರರ ನಾಮಕರಣವಾದೊಡನೆ ನಿನ್ನ ಮಂದಬುದ್ಧಿಗೆ ಹೊಳೆಯಲಿ ಕಾಮುಕ ಕಣ್ಣಿನ ಕಥೆ.

**ಸುರೇಶ—** ನಿನ್ನಂಥ ಕುಮಾರಿಯರು ಉಯ್ಯಾಲೆಯಾಡುತಿಹರು ಎನ್ನ ತೂಗುವ ಮಂಚದಮೇಲೆ. ಆ ದ ರೆ ನಿನ್ನ ರೂಪಕ್ಕೆ ಮರುಳಾಗಿ ಬಂದಿರುವೆ. ಶೀಲದ ಬಲವ ಹೇಳದೆ ನ ನ ಗ ಸು ಕೂ ಲ ಳಾ ಗು. ಇಲ್ಲವಾದರೆ....

**ನೀಲಾ—** ನಿನ್ನ ಬೆದರಿಕೆಗೆ ಬಗ್ಗುವ ಬಾಲೆಯಲ್ಲ. ಹೊಯ್ಕಾಲೆಯರಂತೆ ಪರರ ಮಂಚದ ಉಯ್ಯಾಲೆಯಾಡುವ ಹುಡಿಗಿಯಲ್ಲ ನಾನು. ಹೊರಡು ಇಲ್ಲಿಂದ.

**ಸುರೇಶ—** ನಿನ್ನ ಬೆದರಿಕೆಗೆ ಹೋಗುವ ಹಗುರೆದೆಯವ ನಾನಲ್ಲ. ನಿನ್ನ ಬಣ್ಣಕ್ಕೆ ಮೆಚ್ಚಿ ಬಂದಿರುವೆ. ಹಗೆನುಡಿಯಾಡದಿರು ಹೆಣ್ಣೆ!

**ನೀಲಾ—** ಹೆಣ್ಣಿನಮೇಲೆ ಕಣ್ಣಿಟ್ಟ ದಶಕಂಠನ ರುಂಡಗಳು ಹಾರಿದವು. ಕೌರವನ ಕುಲ ಕಡಲಬತ್ತಿತು. ಯಮನ ಕೋದಂಡ ನಡುಗಿತು. ಮುಕ್ಕಣ್ಣ ಮಸಣ ಸೇರಿದನು ಪರಹೆಣ್ಣಿನ ಹವಣಿಕೆ ಸಾವಿನ ಎಣಿಕೆ.

**ಸುರೇಶ—** ನೀಲಾ! ಸರಿದರೆ ಸಾವಿನ ಬಾಯಿಗೆ ತುತ್ತಾಗುವಿ. ಧ ರ್ಮ ಬ ಂ ಧ ನ ಬಿಟ್ಟು ಬಂದಿರುವೆ ನಿನ್ನ ರೂಪಕ್ಕೆ ಮನಸೋತು. (ಮುಟ್ಟಲು ಹೋಗುವನು)

**ನೀಲಾ—** (ಹಿಂದಕ್ಕೆ ಸರಿದು) ನನ್ನ ಕೂದಲೆಳೆಯಲಿ ಬೆಂಕಿಯ ಕಿಡಿ ಹಾರುವದು. ಮುಟ್ಟಿದರೆ ಕರಕಾಗುವದು ನಿನ್ನ ಕಲುಷಿತ ಕಾಯಾ!

**ಸುರೇಶ—** (ನಗುತ್ತ) ಅದಾವ ಬೆಂಕಿ ಸುಡುವದು ನೋಡಲೇ (ಮುಟ್ಟಲು ಹೋಗುವನು)

**ನೀಲಾ—** (ಹಿಂದಕ್ಕೆ ಸರಿದು) ದೇವಿ! ಸ್ತ್ರೀಧರ್ಮದ ಶೀಲವಿದ್ದರೆ ಅದು ಈ ಕಾಮುಕನ ಕಾಯ ದಹಿಸಲಿ!

**ಸುರೇಶ**— ಉರಿ! ಉರಿ!! ಹಾ! (ನೆಲಕ್ಕೆ ಬೀಳುವನು)

**ಇಂದ್ರಾ**— ಅಂತ್ಯಜರ ಗರ್ಭದಿಂದೆದ್ದ ಉರಿ! ನೀಲಾಕುಮಾರಿಯ ಶೀಲದುರಿ. ನೀಲಾ! ನನ್ನ ಅಣ್ಣನಮೇಲೆ ದಯೆತೋರು. (ಸುರೇಶನ ಹಿಡಿದೆತ್ತುವಳು)

**ಸುರೇಶ**— ನೀಲಾ! ತಿಳಿಯಲಾರದೆ ಕೆಣಕಿದೆನು. ನೀನು ನನ್ನ ಜೀವ ಉಳಿಸು.

**ನೀಲಾ**— ದೇವಿ ಈ ದೀನಪುತ್ರಿಯ ಮಾನವ ಕಾಪಾಡಿ ಜಗತ್ತಿಗೆ ನಿನ್ನ ಮಹಿಮೆ ತೋರಿಸಿದಿ. ಪಶ್ಚಾತ್ತಾಪದಿಂದ ಪರಿಶುದ್ಧವಾದ ಈತನನ್ನು ಉದ್ಧರಿಸು.

**ಸುರೇಶ**— ಸ್ತ್ರೀಧರ್ಮದ ತೇಜವಕಂಡೆ! ನೀಲಾ! ನಾನು ಶೂದ್ರ ಹೊಲೆಯ, ಕ್ರೂರ, ಕೀಳ. ನೀನು ಉಚ್ಚ ಕುಲಜಳು. ಗುಣದಿಂದ ಹೀನ ನಾದವನು ಕೀಳನು ಎಂಬುದನು ಜನತೆಗೆ ತಿಳಿಸುತ್ತ ಅಸ್ಪೃಶ್ಯ ನಿವಾರಣೆಯ ಕಾರ್ಯ ಜೀವಪರ್ಯಂತರ ಮಾಡುವೆನು. ಇದೇ ನನ್ನ ವಚನ.

**ಜೀವನ**— (ಪ್ರವೇಶ) ಸಾವುಕಾರರೇ ಯಾವ ವಚನ?

**ಸುರೇಶ**— ಉಚ್ಚಕುಲಜನೆಂದು ಅಂತ್ಯಜರನ್ನು ಪೀಡಿಸಿ ಪ್ರಾಯಶ್ಚಿತ್ತಹೊಂದಿ ಪರಿಶುದ್ಧನಾದ ನಾನು ಹರಿಜನೋದ್ಧಾರ ಮಾಡುವ ವಚನ.

**ಇಂದ್ರಾ**— ಅಣ್ಣಾ! ನಿನ್ನಂತೆ ಭಾರತದ ಬಂಧುಗಳ ಹೃದಯ ಪರಿವರ್ತನೆಯಾದರೆ ಅಸ್ಪೃಶ್ಯತೆಯು ಅಡಗಿ ಐಕ್ಯತೆಯು ಬೆಳೆದು ಮಾನವ ಸಮಾನತೆಯ ಶುಭಮುಂದುಭಿ ಭಾರತದಲ್ಲಿ ಮೊಳಗಿದರೆ ಅಂದೇ ಆದರ್ಶ ರಾಷ್ಟ್ರ.

**ನೀಲಾ**— ದುಃಖಜೀವಿಗಳಿಗೆ ದಯೆತೋರುವ ತಾಯಿ! ನೀನೇ ಧರ್ಮದೇವತೆ. ನೀನೆನ್ನ ಧರ್ಮದೇವತೆ.

**ಜೀವನ**— ವಿಪತ್ತಿನ ಕಗ್ಗತ್ತಲೆಯಲಿ ನಿಂತು ದಾರಿ ಕಾಣದ ದುರ್ಜೀವಿಗಳಿಗೆ ದಾರಿತೋರಿಸಲು ಮುಂದಾದ ಇಂದ್ರಾದೇವಿ ನಿನ್ನ ಆತ್ಮ ಶಕ್ತಿಯ ತೇಜವ ಕಂಡೆ! ಆನಂದ ಹೊಂದಿದೆ.

## ಪದ

ರಾಗ- ಕಾಫಿ                    ತಾಳ- ತ್ರಿತಾಳ

ನೀನೇ ಪರಮಪಾವನೆಯು! ನೀನೇ ಸುರರ
ರಂಜನಿಯು। ನೀನೇ ಸತಿಧರ್ಮದಾ ಗತಿಯು।
ನೀನೇ ಅತಿ ನೀತಿಯ ಸದ್ಗತಿಯು॥

**ಇಂದುಧರ**— (ಪ್ರವೇಶ) ಅದಾವ ತೇಜವ ಕಂಡೆ! ಹಾ! ಇದಾವ ಚಿತ್ರ!

**ಸುರೇಶ**— ಇಂದುಧರ! ಧರ್ಮದ ಮದದಿಂದ ಕೊಬ್ಬೇರಿ ಕುಲ ಕುಲವೆಂದು ದಲಿತರಮೇಲೆ ದಬ್ಬಾಳಿಕೆ ಮಾಡಿದ ಈ ಪಾಪಿಯ ಚಿತ್ರ! ಶೀಲದ ಶೈಲದಿಂದ ಸುಶೋಭಿತವಾದ ಪವಿತ್ರ ಜೀವಿಗಳ ಸಜೀವ ಚಿತ್ರ! ಸತ್ಯಪ್ರೇಮದ ಚಿತ್ರ! ಆ ಚಿತ್ರಗಳ ಮಧ್ಯದಲಿ ನಿಂತ ದುರ್ಜೀವಿಗೆ ದಯ ತೋರಿಸಿ ಕ್ಷಮಿಸು ಇಂದುಧರಾ! (ಕಾಲಿಗೆಬೀಳುವನು)

**ಇಂದುಧರ**— ಆನಂದ! ಸುರೇಶ ಏಳು! ಪರಿಶುದ್ಧವಾದ ಪ್ರೇಮ ಕಂಡೆ!! ಅಸ್ಪೃಶ್ಯ ನಿವಾರಣೆಯ ಕಾರ್ಯಕ್ಕೆ ಪ್ರಥಮಜಯ ತಂಗಿ! ಇಂದ್ರಾ! ನಿನ್ನ ಆತ್ಮಪ್ರಭೆಯು ಅಮೋಘವಾದುದು.

**ಇಂದ್ರಾ**— ಅಣ್ಣಾ! ವರ್ಣಿಸಬೇಡ. ಮಾನವಳಾಗಿ ಹುಟ್ಟಿ ಮಾನವರು ಮಾಡಬೇಕಾದ ಕಾರ್ಯ ಮಾಡಿರುವೆ. ಸೂರ್ಯಪ್ರಭೆಗೆ ಪ್ರಭಾವೇವಿಸಾಗಿಬರುವದು ಇದು ನಿಸರ್ಗದ ನಿಯಮ! ನನ್ನದು ಅಲ್ಪಕಾರ್ಯ. ಸುಖ ವಿಲಾಸದ ಮರೆ. ಬೇಗ ಬೆಳಗು ಅನ್ನುದೇ ಅಸ್ಪೃಶ್ಯ ನಿವಾರಣೆಗೆ ಮುಂದಾದ ನಿಮ್ಮಮುಂದೆ ನನ್ನ ಸಾಹಸವೆಷ್ಟರದು.

**ದೇವದಾಸ**— (ಪ್ರವೇಶ) ಮಗು! ಇಂದುಧರ (ಅಪ್ಪಿಕೊಳ್ಳುವನು)

**ಇಂದುಧರ**— ಮುಟ್ಟದಿರು! ಮುಟ್ಟಿದರೆ ಮೈಲಿಗೆಯಾಗುವದು ನಿಮ್ಮ ಪರಿಶುದ್ಧ ದೇಹ. ನಾನು ಅಸ್ಪೃಶ್ಯನು.

**ದಯಾವತಿ**— (ಪ್ರವೇಶ) ಮಗು! ನಾ ನಿನ್ನ ತಾಯಿಯಲ್ಲವೇ? ನನ್ನಮೇಲೆ ನಿನ್ನ ಮಮತೆ ಇಲ್ಲವೇ!

**ಇಂದುಧರ**— ಅಮ್ಮಾ! ಮಾಯಾ ಮಮತೆ ಮಾಯವಾಗಿದೆ. ತಂದೆ-ತಾಯಿಗಳಿಲ್ಲ. ಸುಖ-ದುಃಖವಿಲ್ಲ. ಜಾತಿ-ಪಂಥವಿಲ್ಲ ಈ ಅಸ್ಪೃಶ್ಯನಿಗೆ.

**ದಯಾವತಿ**— ಪುತ್ರಪ್ರೇಮದಿಂದ ಬಂದ ಈ ಮುಪ್ಪಿನ ಮಾತೆ ಯಮೇಲೆ ಕರುಣೆತೋರು.

**ಇಂದುಧರ**— ಈ ಶೂದ್ರನಿಗೆ ಪುತ್ರನೆಂದು ಕರೆದರೆ ನಿಮ್ಮ ಉಚ್ಚ ಕುಲಕ್ಕೆ ಕಲಂಕವಮ್ಮಾ! ಮಾನವ ಧರ್ಮದಮೇಲಿನ ಕರುಣೆಯಮುಂದೆ ಮಾತಾ-ಪಿತರಮೇಲಿನ ಕರುಣೆ ಇಲ್ಲದಾಗಿದೆ.

**ದೇವದಾಸ**— ಮಗು! ಹಗೆ ನುಡಿಯಾಡದಿರು. ಯಾವ ಕುಲದ ಕಟ್ಟು. ನಿಟ್ಟು ನಿಟ್ಟುಗಳಲ್ಲಿ ಕಿಚ್ಚನೆ ಒಟ್ಟಿ ಮಾನವರ ಕಚ್ಚುತಿದೆ. ಅಂಥ ಕುಲ, ಅಂಥ ಜಾತಿ ಮೆಟ್ಟಿ ಸತ್ಯಧರ್ಮವ ಮೆಚ್ಚಿ ಮಮತೆಯಿಂದ ನಿನ್ನೆಡೆಗೆ ಬಂದಿರುವೆ ಮಗು! ಸ್ಪೃಶ್ಯಾ-ಸ್ಪೃಶ್ಯವೆಂಬ ಭೇದವಿಲ್ಲ. ಕೀಳು-ಮೇಲಿನ ಛಲವಿಲ್ಲ ಹಣ್ಣಾದ ಈ ಜೀವಿಗಳಿಗೆ. ಆನಂದವನ್ನುಂಟುಮಾಡು. (ಅಪ್ಪುವನು)

**ಇಂದುಧರ**— ತಾತಾ! ಧನ್ಯನಾದೆ! ತಮ್ಮ ದಿವ್ಯಮುಖದಿಂದ ಹೊರಟ ಉದ್ಗಾರದಿಂದ ಆನಂದಹೊಂದಿದೆ. ನನ್ನನ್ನು ಆಶೀರ್ವದಿಸಿ ಉದ್ಧರಿಸಿರಿ. (ಪಾದಕ್ಕೆಬೀಳುವನು)

**ದೇವದಾಸ**— ಮಗು! ಏಳು ನಿನ್ನಾಶೆ ಈಡೇರಲಿ! ಜೀವನಾ ನಿನ್ನನ್ನು ಅನಂತರೀತಿಯಿಂದ ಪೀಡಿಸಿದೆ. ಹೃದಯ ನೋಯಿಸಿದೆ. ನಿನ್ನ ಶುಭ್ರಮನಸ್ಸು ಕಂಡೆ. ನನ್ನ ಕೊನೆಯಾಶೆ ಈಡೇರಿಸು.

**ಜೀವನ**— ಅನ್ನದಾತರೇ ತಾವು ಬಿಸಿಯುಸಿರು ಕರೆದರೆ ನನ್ನ ತನು ನಡುಗುತಿದೆ. ತಮ್ಮ ಇಚ್ಛೆ ಪೂರೈಸಲು ಸದಾ ಸಿದ್ಧನಿರುವೆ.

**ದೇವದಾಸ**— ಜೀವನಾ! ಅಸ್ಪೃಶ್ಯ ನಿವಾರಣೆಯೆಂದು ಬರಿ ಮಾತುಬೇಡ ಇದಕ್ಕೆ ನಾನು ಮೊದಲು ಮುಂದಾಗುವೆ. ನಿನ್ನ ತಂಗಿ

ಯಾದ ನೀಲಾದೇವಿಯನ್ನು ಇಂದುಧರನಿಗೆ ಕೊಟ್ಟು ಈ ನವಜೀವನ ದಂಪತಿಗಳ ಸಂಭ್ರಮ ನೋಡಬೇಕೆಂಬ ಹಿರಿಯಾಶೆ ನನ್ನದು.

**ಸುರೇಶ**— ನನ್ನಲ್ಲಿಯ ಜಾತಿಯಭೂತ ದೂರಾಯಿತು. ಇದಕ್ಕೆ ಮೊ ದ ಲು ನಾನು ಮುಂದಾಗುವೆ. ನನ್ನ ತಂಗಿ ಇಂದ್ರಾದೇವಿಯನ್ನು ನೀನು ವಿವಾಹವಾಗಿ ಸಮಾಜಕ್ಕೆ ಮಾದರಿಯಾಗಬೇಕಾಗಿ ನನ್ನ ಆಶೆ.

**ಜೀವನ**— ನಿಮ್ಮಿಂದ ಶುದ್ಧನಾದೆ. ಸಿದ್ಧಿಯಕಂಡೆ. ನಿಮ್ಮಾದೇಶ ದಂತೆ ನಡೆಯುವೆ.

**ಶಿಲಾಕಾಂತ + ಕಲ್ಲುಬಾಯಿ**— (ಪ್ರವೇಶ)

**ಶಿಲಾಕಾಂತ**— ಜೀವನಾ! ಜೀವನಾ! ಇಂದು ನೀನು ಸ್ಪೃಶ್ಯ!

**ಕಲ್ಲುಬಾಯಿ**— ಇಂದುಧರ-ನೀಲಾ ಜೀವನ-ಇಂದ್ರಾದೇವಿ ನಿಮ್ಮ ನಗೆಮೊಗವ ನೋಡಿ ಹಿಡಿಸಲಾರದಷ್ಟು ಆನಂದ.

**ದೇವದಾಸ**— ಜಾತಿ ಜಾತಿ ಎಂಬ ಶತೃಬುದ್ಧಿಯಿಂದ ಮಾನವ ರನ್ನು ಕೀಳರೆಂದು ತಿಳಿಯುವದು ಸ್ವತಂತ್ರಭಾರತಕ್ಕೆ ಇದೊಂದು ಕಲಂಕ. ನಾವೆಲ್ಲರೂ ನಿಜವಾದಧರ್ಮ ಸ್ವೀಕರಿಸಿದ್ದೇವೆ ಇಂದುಧರನೊಡನೆ ನೀಲಾ ದೇವಿ, ಜೀವನನೊಡನೆ ಇಂದ್ರಾದೇವಿಯ ವಿವಾಹ.

**ಶಿಲಾಕಾಂತ**— ಧನ್ಯ! ಈ ಮಾದರಿಯ ಮದುವೆಯಲ್ಲಿ ನನ್ನ ಸಂಪತ್ತಿನ ಸದುಪಯೋಗ.

**ಕಲ್ಲುಬಾಯಿ**— ಈ ಧರ್ಮಶೀಲರ ಲಗ್ನದಲ್ಲಿ ನಾನು ಮೊದಲು ಗಿತ್ತಿ! ಮುತ್ತೈದಿ!!

**ದೇವದಾಸ**— ಈ ಮಾದರಿಯ ಮದುವೆ ಎಲ್ಲ ಸಮಾಜಕ್ಕೂ ಮಾದರಿಯಾಗಬೇಕು. ಆದು ಮಹದೀಶ್ವರನಮುಂದೆ. (ಹೋಗುವರು)



## ೬ ನೇ ಪ್ರವೇಶ

ಸ್ಥಳ:- ಮಹದೀಶ್ವರನ ಮಂದಿರ ಸಮಯ:- ಮುಂಜಾವು

(ವಧು-ವರರಿಗೆ ಕಲ್ಲುಬಾಯಿ ಆರುತಿ ಮಾಡುವಳು. ಜೀವನನಿಗೆ ಇಂದ್ರಾ ಇಂದುಧರನಿಗೆ ನೀಲಾ ಇವರ ವಿವಾಹ. ವಧು-ವರರು ದೇವರಿಗೆ ನಮಸ್ಕರಿಸುವರು)

**ದೇವದಾಸ—** ಜೀವನ, ಇಂದ್ರಾ; ಇಂದುಧರ, ನೀಲಾ ನಿಮಗೆ ಅಖಂಡ ಕಲ್ಯಾಣವಾಗಲಿ. ನಿಮ್ಮ ನವಜೀವನ ನೌಕೆಯು ಬಾಳಕಡಲಲಿ ಸುಗಮವಾಗಿ ಸಾಗಲಿ. ಮಾನವ ಕಲ್ಪನಾ ಪಟಲದಮೇಲೆ ಚಿತ್ರಿತವಾಗಿ ಅಸ್ಪೃಶ್ಯ ನಿವಾರಣೆಯ ಶುಭದುಂದುಬಿ ಭಾರತದಲಿ ಮೊಳಗಲಿ ಇದೆನ್ನ ಶುಭಾಶೀರ್ವಾದ. ಭಾರತ ಬಾಂಧವರೇ ಹಿಂದೊಮ್ಮೆ ವಿಶ್ವಪ್ರೇಮಿಯಾದ ಮಹಾತ್ಮಾ ಬಸವಣ್ಣನವರು ಮಧುವರಸನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟು ವಿವಾಹಮಾಡಿ ಅಸ್ಪೃಶ್ಯ ನಿವಾರಣೆ ಮಾಡಿದರು. ಮಾನವೇಂದ್ರ, ರಾಜಾರಾಮ ಮೋಹನರಾಯ, ಜಗತ್ಪ್ರಸಿದ್ಧ ರವಿಂದ್ರ ನಾಥ ಠಾಗೋರ, ಸ್ವಾಮಿ ವಿವೇಕಾನಂದ, ಪೂಜ್ಯ ಮಹಾತ್ಮಾಗಾಂಧೀಜಿ ಇವರು ಅಸ್ಪೃಶ್ಯ ನಿವಾರಣೆಗಾಗಿ ದೇಹ ಸವಿಸಿದರು. ಮಾನವಧರ್ಮದ ತತ್ವ ತಿಳಿಸಿದರು. ಉದ್ಯೋಗದಿಂದ ಬೆಳೆದುಬಂದ ಜಾತಿ ವಿನಾಶದತ್ತ ನಮ್ಮನ್ನು ಸಾಗಿಸಿದೆ. ಮಾನವರೆಲ್ಲರು ಒಂದು ಎಂಬ ಉದಾತ್ತ ಭಾವನೆ ಯಿಂದ ಅಸ್ಪೃಶ್ಯ ನಿವಾರಣೆ ಮಾಡಬೇಕು. ಎಲ್ಲರೂ ಒಂದಾಗಿ ಚೆಂದಾಗಿ ಸಾಗಿ ನಮ್ಮ ಭಾರತ ಆದರ್ಶ ರಾಷ್ಟ್ರವನ್ನಾಗಿ ಮಾಡವದೇ ಭಾರತೀಯ ರಾದ ನಮ್ಮ ಕರ್ತವ್ಯ.

**ಸುರೇಶ—** ಜಾತಿ-ಪಂಥಗಳ ನೆವದಿಂದ ಸ್ವಾರ್ಥ ಬಯಸುವವರು ಕೆಲವರು. ಭೂಮಿ-ಸೀಮಿಯಿಂದ ಸಿರಿವಂತರಾಗಿ ಭವ್ಯ ಭವನಕಟ್ಟಿ

ಮೆರೆವವರು ಕೆಲವರು. ಮುರುಕು ಗುಡಿಸಲಿನಲ್ಲಿ ದೀಪಕ್ಕೆ ಎಣ್ಣೆಯಿಲ್ಲದೆ ಕತ್ತಲಲ್ಲಿ ಉಣ್ಣುವವರು ಕೆಲವರು. ಸ್ಪೃಶ್ಯರು ಕೆಲವರು. ಅಸ್ಪೃಶ್ಯರು ಕೆಲವರು. ಹೀಗೆ ಭೇದ ಭಾವನೆಯ ಅನೇಕ ಸಮಸ್ಯಗಳು ಭಾರತ ಸರಕಾರಕ್ಕೆ ಬಿಡಿಸಲಾರದ ಸಮಸ್ಯೆಗಳಾಗಿವೆ. ಭಾರತೀಯರಾದ ನಾವು ಸುಖದಿಂದ ಬಾಳಿ ಬದುಕಬೇಕಾದರೆ ಅಸ್ಪೃಶ್ಯ ನಿವಾರಣೆ ಮಾಡಬೇಕು ಎಂದು ಬೇಡಿಕೊಳ್ಳುವೆನು.

**ಇಂದುಧರ**— ದೇವರು ಒಬ್ಬನು. ಆ ದೇವ ದೇವನ ಮಕ್ಕಳಾದ ನಾವೆಲ್ಲರು ಬಂಧುಗಳು. ನಮ್ಮ ನಮ್ಮಲ್ಲಿಯ ಸ್ಪೃಶ್ಯ–ಅಸ್ಪೃಶ್ಯವೆಂಬ ವಿಷಯ ವಿಚಾರ ನೀಗಿ ಬಲಿಷ್ಠವಾದ ಸಮಾಜಕಟ್ಟಿ ಭಾರತದ ಹಿರಿಮೆಯನ್ನು ವಿಶ್ವದಲ್ಲಿ ತೋರಿಸಲು ಮುಂದಾಗಬೇಕು. ಜಾತಿ-ವಿಜಾತಿಗಳ ತಾರತಮ್ಯಬಿಟ್ಟು ಮೂಲೆ ಮೂಲೆಗಳಲ್ಲಿ ಹೊಕ್ಕು ಅಸ್ಪೃಶ್ಯ ನಿವಾರಣೆ ಮಾಡಬೇಕು.

**ಜೀವನ**— ಅಸ್ಪೃಶ್ಯತೆಯು ಮಾನವ ಪ್ರಪಂಚವನ್ನೇ ದಿಕ್ಕುಗಾಣದಂತೆ ಮಾಡಿದೆ. ಅದಕಾಗಿ ಅಸ್ಪೃಶ್ಯ ನಿವಾರಣೆ ಕಾಯ್ದೆಮಾಡಿ ಜನತಾ ಸರಕಾರವು ಅಸ್ಪೃಶ್ಯರಮೇಲೆ ಅತ್ಯಂತ ಉಪಕಾರ ಮಾಡಿದೆ. ನನ್ನ ಹರಿಜನ ಬಾಂಧವರೇ! ನಾವು ಮೊದಲು ಸುಧಾರಣೆಯಾಗಬೇಕು. ನಮ್ಮಲ್ಲಿ ರೂಢಿಯಿಂದಬಂದ ದೇವದಾಸಿ ಪದ್ಧತಿಯನ್ನು ನಿರ್ಮೂಲನ ಮಾಡಬೇಕು. ಕೀಳರಾಗಿ ನಾವು ಬಾಳಹತ್ತಿದ್ದರಿಂದ ಮುಟ್ಟಲಾರದ ಮಾನವರಾಗಿದ್ದೇವೆ. ಸ್ವತಂತ್ರ ಭಾರತದ ಪ್ರಜೆಗಳಾದ ನಾವು ಶ್ರದ್ಧಾಚರಣೆಯಿಂದ ನಡೆಯಬೇಕು. ನಮ್ಮ ಕಾಯಕದಲ್ಲಿ ಭಕ್ತಿ-ವಿಶ್ವಾಸವನಿಟ್ಟು ದುಡಿಯಬೇಕು. ಸುಶೀಕ್ಷಿತರಾಗಬೇಕು. ಅಂದೇ ಮಾನವರಾಗಿ ಮಾನವರೊಡನೆ ಕೂಡಿ ನಡೆಯಲು ಸಮಾನರಾಗುವೆವು.

**ಇಂದ್ರಾ**— ಜಾತಿ–ಸಂಘಗಳನ್ನು ನಿರ್ಮೂಲನಮಾಡಿ ಐಕ್ಯತೆಯನ್ನು ಬೆಳೆಯಿಸುವದರಲ್ಲಿ ಸ್ತ್ರೀಯರಾದ ನಾವು ಮೊದಲು ಮುಂದಾಗಬೇಕು. ಜಾತಿಯ ದುರ್ಭಾವನೆಯನ್ನು ನಾವು ನಮ್ಮ ಮನೆಯವರಲ್ಲಿ

ಇಲ್ಲದಂತೆ ಮಾಡಬೇಕು. ಆಮೇಲೆ ಊರು, ಸಮಾಜ, ರಾಷ್ಟ್ರ ಸುಧಾರಣೆ ಯಾಗುವದು. ಜಾತಿ–ವಿಜಾತಿಗಳ ನಡುವಿನ ತಿಳುವಳಿಕೆ ತಿಳಿಸಲು ನಾವು ಜ್ಞಾನದೀಪಗಳಾಗಬೇಕು. ಅಂದರೆ ನಮ್ಮ ಬಳಿಯಲಿ ಬೆಳೆಯುವ ಮಕ್ಕ ಳಲ್ಲಿ ಆ ಜ್ಯೋತಿ ಉದಯವಾಗಿ ಉದಾತ್ತ ಧ್ಯೇಯದ ಭಾವೀ ಜನಾಂಗವೇ ತಯಾರಾಗುವದು. ಸ್ಪೃಶ್ಯಾ-ಸ್ಪೃಶ್ಯತೆ ಅಡಗಿ ಆದರ್ಶ ರಾಷ್ಟ್ರವಾಗುವದು.

**ನೀಲಾ**— ನಮ್ಮ ಸಮಾಜದ ಅಕ್ಕ-ತಂಗಿಯರೇ! ದೇವರ ಹೆಸರಿ ನಿಂದ ಸೂಳೆಯರಾಗಿ ಬಾಳಿ ಬದುಕುವ ಕೀಳು ಪದ್ಧತಿಯನ್ನು ಮೊದಲು ನಿಲ್ಲಿಸಬೇಕು. ಸ್ತ್ರೀಧರ್ಮದಂತೆ ನಡೆದು ನಮ್ಮ ಸಮಾಜ ಸು ಧಾ ರ ಣೆ ಮಾಡಬೇಕು. ಅಸ್ಪೃಶ್ಯರೆಂದು ಅನ್ನಿಸಿಕೊಳ್ಳಲು ನಮ್ಮಲ್ಲಿದ್ದ ಹೀನ ನಡ ತೆಯೇ ಕಾರಣವಾಗಿದೆ. ನಾವು ಸದ್ಗುಣಶೀಲರಾಗಿ ಬಾಳಿದರೆ ಅಸ್ಪೃಶ್ಯ ನಿವಾ ರಣೆಯಾಗುವದರಲ್ಲಿ ಸಂದೇಹವಿಲ್ಲ.

**ಶಿಲಾಕಾಂತ**— ಮಾನವರಲ್ಲಿ ಮೇಲು-ಕೀಳು ಅನ್ನುವದು ಮಹಾ ಪಾಪ. ಈ ನವಜೀವನ ಪ್ರೇಮ ಮೂರ್ತಿಗಳ ಆದರ್ಶ ವಿವಾಹದಿಂದ ನವ ಸಮಾಜ ನಿರ್ಮಾಣವಾಗಿ ಅಸ್ಪೃಶ್ಯನಿವಾರಣೆ ಆ ಗು ತ್ತ ದೆ. ಎಲ್ಲರೂ ಮಹದೀಶ್ವರನ ಮುಂದೆ ಅಸ್ಪೃಶ್ಯ ನಿವಾರಣೆಯನ್ನು ತನು-ಮನ-ಧನದಿಂದ ಸಹಾಯ ಮಾಡುವೆನೆಂದು ಪ್ರತಿಜ್ಞೆ ಮಾಡಿರಿ. ಮಾನವರೆಲ್ಲರನ್ನು ಕರುಣೆ ಯಿಂದ ಕಾಣಬೇಕೆಂಬ ಭಾವನೆಯುಳ್ಳವರಾಗಿರಿ.

**ದಯಾವತಿ**— ನವಜೀವನ ವಧು–ವರರು ಚಿರಸುಖಿಯಾಗಿ ಬಾಳಲಿ. ಇವರ ಪ್ರೇಮ ಸತ್ಯಾಸತ್ಯಗಳ ಚಿತ್ರ ಸಮಾಜಕ್ಕೆ ಆದರ್ಶವಾ ಡಲಿ. ನವಜೀವನದಿಂದ ನವಭಾರತ ಬಾಳಿ ಬೆಳಗಲಿ.

**ಕಲ್ಲುಬಾಯಿ**— ಈ ಮಾದರಿಯ ಮ ದು ವೆ ಗೆ ಮೊದಲಗಿತ್ತಿ ನಾನು. ನನ್ನ ಅಕ್ಕ–ತಂಗಿಯರೇ ಹರಿಜನೋದ್ಧಾರ ಶುಭ ಸಮಯದಲ್ಲಿ ಮುತ್ತೈದೆಯರಾಗಿ ಆರತಿ ಮಾಡಲು ಬನ್ನಿರಿ. ಈ ವಧು-ವರರಿಗೆ ಶುಭಾ ಶೀರ್ವಾದ ನೀಡಿರಿ!

**ದೇವದಾಸ—** ದೇಶಕ್ಕೆ ಸಲ್ಲಿಸಬೇಕಾದ ಸೇವೆಗಳಲ್ಲಿ ಹ ರಿ ಜ ನ ಸೇವೆಯು ಪವಿತ್ರವಾದುದು. ಪರಮ ಪೂಜ್ಯ ಮಹಾತ್ಮಾ ಗಾಂಧೀಜಿಯ ಪ್ರೀತಿಗೆ ಪಾತ್ರವಾದದು. ಮಹದೀಶನವಯಿಂದೆ ನವಜೀವನದ ಜ್ಞಾನದೀಪ ಹಚ್ಚಬೇಕು. ಇಂತಹ ಕೋಟಿ ಕೋಟಿದೀಪ ಭಾರತ ಬೆಳಗಬೇಕು. ಹಳ್ಳಿ ಹಳ್ಳಿಗೂ ಬೆಳಕು ಬೀರಬೇಕು. ಗತಿಸಿದ ಜ ಗ ದ ಜೀವಜ್ಯೋತಿ ಗಗನ ತಾರೆಗಳಂತೆ ಭೂಗೋಲವ, ಖಗೋಲವ ಬೆಳಗಬೇಕು. ಎಲ್ಲರೂ ಅಸ್ಪೃಶ್ಯ ನಿವಾರಣೆ ಮಾಡಬೇಕು.

**ಜೀವನ + ಇಂದುಧರ—** ಜೈಹಿಂದ! ಮಹಾತ್ಮಾಗಾಂಧೀಕಿ ಜೈ!!
(ಮಾತೃಭೂಮಿಯ ಜಯಘೋಷ ಮಾಡುವರು)

**ಪದ**

ರಾಗ- ಭೈರವಿ ತಾಳ- ತ್ರಿವಿಟ

ಶಾರದೆ ಶುಭಕಾರೆ। ಜಯ ಜಯ। ಶಾರದೆ ಶುಭಕಾರೆ ॥ಪಲ್ಲ॥
ಶ್ಯಾಮೆ ಸುಮಾತಾ। ದೇವಿ ಶಾರದೆ। ಪೂಜಿಪೆನು। ಪಾಹಿ
ಜಯ ಜಯ ಶುಭಕಾರೆ। ನೀಡು ಪ್ರಮೋದ ಮಾತೆ ಬಾಗುತೆ।
ಪಾಡುವೆ ನಾ ನಿರುತಾ ಜಯ ಜಯ ಶಾರದೆ ॥೧॥

ಓಂ ಶಾಂತಮ್ ಸಮೃದ್ಧಮ್

